ಮಹಾಭಾರತಾಮೃತದ ಸಭಾಪರ್ವದೊಳಗಿನ

# ರಹಸ್ಯಗಳು.



ಲೇಖಕ.

**ವೇಂಕಟೇಶ ತಿರಕೊ ಕುಲಕರ್ಣಿ ಗಳಗನಾಥ.**

( ೧ನೆಯಾವೃತ್ತಿ ೧೦೦೦ ಪ್ರತಿಗಳು )



———(೦)———

1933




ಬೆಲೆ ] ೩ ಆಣೆ. ]



ಮುದ್ರಕ—ವೇಂಕಟೇಶ ತಿರಕೋ ಕುಲಕರ್ಣಿ ಗಳಗನಾಥ.
ಮುದ್ರಣಾಲಯ—ಶ್ರೀವೇಂಕಟೇಶ ಪ್ರಿಂಟಿಂಗ ಪ್ರೆಸ್ ಹಾವೇರಿ.
ಪ್ರಕಾಶಕ—ವೇಂಕಟೇಶ ತಿರಕೋ ಕುಲಕರ್ಣಿ ಗಳಗನಾಥ.
ಪ್ರಸಿದ್ಧಿಸುವ ಸ್ಥಳ—ಶ್ರೀ ಸದ್ಗುರು ಆಪೀಸ್ ಹಾವೇರಿ.
ಜಿಲ್ಹಾ ಧಾರವಾಡ.



# ಪ್ರಸ್ತಾವನೆ.



ಈಗಿನ ಕಾಲಕ್ಕನುಸರಿಸಿ ರಾಷ್ಟ್ರಹಿತಮಾಡುವವರಿಗೆ, ಐದನೆಯ ವೇದವೆನಿಸುವ ಮಹಾಭಾರತದೊಳಗಿನ ಭಗವಾನ್ ವೇದವ್ಯಾಸರ ವಿವಿಧವಿಷಯಗಳ ರಹಸ್ಯಜ್ಞಾನವಾಗುವದು ಅವಶ್ಯವಾಗಿರುತ್ತದೆ; ನಾವು ಪ್ರಾಮುಖ್ಯವಾಗಿ ಇದೇ ಉದ್ದೇಶದಿಂದಲೇ ಮಹಾಭಾರತಾಮೃತವನ್ನು ಬರೆಯತೊಡಗಿರುವೆವು. ಸಂಪೂರ್ಣಮಹಾಭಾರತಾಮೃತವನ್ನು ಭಾಗಶಃ ಕೊಳ್ಳುವವರಿಗೆ ಅದರ ರಹಸ್ಯಗಳ ಪ್ರಾಪ್ತಿಯು ಸಹಜವಾಗಿಯೇ ಆಗುವದು; ಆದರೆ ಇಡಿಯ ಭಾರತಕೊಳ್ಳಲು ಶಕ್ತಿಯಿಲ್ಲದವರು, ಬರಿಯ ರಹಸ್ಯಗಳನ್ನಾದರೂ ಅವಲೋಕಿಸಲೆಂದು ಬುದ್ಧಿಪೂರ್ವಕವಾಗಿ ಎರಡನೆಯ ಭಾಗವಾದ ಸಭಾಪರ್ವದ ರಹಸ್ಯಗಳನ್ನಷ್ಟೇ ಒಟ್ಟುಗೂಡಿಸಿ ಈ ಸ್ವತಂತ್ರ ಪುಸ್ತಕ ಮಾಡಿರುತ್ತೇವೆ. ಇದರಿಂದ ಭಾರತದ ಹಿತಕಾರಕ ರಹಸ್ಯಗಳ ಪ್ರಸಾರವು ಕರ್ನಾಟಕದ ತುಂಬೆಲ್ಲ ಆಗುವದೆಂದು ನಾವು ತಿಳಿದಿರುವೆವು.

ಸದ್ಗುರು ಆಫೀಸ ಹಾವೇರಿ.
ತಾ—೭—೧೦—೧೯೩೩.

ವಿಧೇಯ
ವೇ. ತಿ. ಗಳಗನಾಥ.

# ರಹಸ್ಯಾನುಕ್ರಮಣಿಕೆ.









ಭಾರತಬರೆಯುವ ಗಳಗನಾಥರು.

# ರಹಸ್ಯಗಳು.

ಶ್ರೀ

## ಶ್ರೀಶೇಷಸದ್ಗುರುಸೂಕ್ತಿಮಾಲೆ.

### ೧ ಧಾರ್ಮಿಕತೆಯೇ ನಿಜವಾದ ಸೌಜನ್ಯವು.

**ಧರ್ಮವೂ, ಧರ್ಮಶಾಸ್ತ್ರವೂ**—"ಅಭ್ಯುದಯ–ನಿಶ್ಶ್ರೇಯಸಕರ ವಾದದ್ದು ಧರ್ಮವು." ಎಂದು ಶ್ರೀಶಂಕರ ಭಗವತ್ಪಾದರ ವ್ಯಾಖ್ಯೆಯಿರುವದು. ಅಭ್ಯುದಯವೆಂದರೆ, ಇಹಲೋಕ–ಪರಲೋಕಗಳ ಉತ್ಕರ್ಷವು; ನಿಶ್ಶ್ರೇಯಸವೆಂದರೆ ಮೋಕ್ಷವು. ಇವೆರಡನ್ನು ಒದಗಿಸಿಕೊಡುವದೇ ಧರ್ಮವು. ಹೀಗೆ ಧರ್ಮವು ಉತ್ಕರ್ಷ–ಮೋಕ್ಷಗಳ ಕಾರಣವಿರುವವಲ್ಲದೆ, "ಧಾರಣಾದ್ಧರ್ಮಇತ್ಯಾಹು:" ಇತ್ಯಾದಿ ಮಹಾಭಾರತದ ಅನುಶಾಸನಪರ್ವದಲ್ಲಿಯಭೀಷ್ಮರ ಉಕ್ತಿಯಂತೆ, ಜಗತ್ತಿನ ಧಾರಣೆಗೆ, ಅಥವಾ ಜಗತ್ತಿನ ಅಸ್ತಿತ್ವಕ್ಕೆ ಧರ್ಮವೇ ಕಾರಣವಾಗಿರುವದು. ಹೀಗೆ ಜಗತ್ತಿನ ಅಸ್ತಿತ್ವ–ಉತ್ಕರ್ಷ–ಮೋಕ್ಷ ಇವನ್ನು ಒದಗಿಸಿಕೊಡುವದು, ಧರ್ಮವೆಂದುತಿಳಿಯಬೇಕಾಗುವದು. ಇಂತಹ ಧರ್ಮದಕಟ್ಟಳೆಗಳು ಈಶ್ವರ ಪ್ರಣೀತಗಳು, ಅಥವಾ ಮಹಾಪುರುಷ ಪ್ರಣೀತಗಳು ಆಗಿದ್ದು, ಆ ಕಟ್ಟಳೆಗಳು ಗ್ರಥಿತವಾಗಿದ್ದ ಶಾಸ್ತ್ರಕ್ಕೆ ಧರ್ಮಶಾಸ್ತ್ರವೆನ್ನುವರು.

**ಧರ್ಮದ ಎರಡು ಅಂಗಗಳು**—ಧರ್ಮಕ್ಕೆ ಅಂತರಂಗ ಬಹಿರಂಗ ಎಂಬ ಎರಡು ಅಂಗಗಳಿರುವವು. ಧರ್ಮದ ಅಂತರಂಗವು ಜಗತ್ಕಾರಣನಾದ ದೇವರ ಪ್ರಾಪ್ತಿಗೆ ಸಂಬಂಧಿಸಿದ್ದಾಗಿರುವದು; ಧರ್ಮದ ಬಹಿರಂಗವು ಜಗತ್ತಿನ ಸುಖದ ಪ್ರಾಪ್ತಿಗೆ ಸಂಬಂಧಿಸಿದ್ದಾಗಿರುವದು. ಜಗತ್ಕಾರಣನಾದ ಪರಮೇಶ್ವರನ ಮೂಲಸ್ವರೂಪವು ಶಾಶ್ವತವಾದದ್ದರಿಂದ, ಆತನ ಪ್ರಾಪ್ತಿಗೆ ಕಾರಣವಾದ ಭಕ್ತಿ–ಜ್ಞಾನ–ವೈರಾಗ್ಯಗಳ ಪರಿಪಾಕವಾದ ಧರ್ಮದ ತಾತ್ವಿಕಭಾಗವೆನಿಸುವ ಧರ್ಮದ ಅಂತರಂಗವೂ ಶಾಶ್ವತವಾಗಿಯೇ ಇರುವದು. ಇನ್ನು ಜಗತ್ತು ಯಾವಾಗಲೂ ರೂಪಾಂತರಹೊಂದತಕ್ಕದ್ದಾಗಿದ್ದು, ಆ ಜಗತ್ತಿನ ಸುಖವು ಚಂಚಲವಾಗಿರುವದರಿಂದ, ಜಗತ್ತಿನ ಸುಖದ ಪ್ರಾಪ್ತಿಗೆ ಕಾರಣವಾದ ಲೌಕಿಕಾಚಾರಮಯವೆನಿಸುವ ಧರ್ಮದ ಬಹಿರಂಗವೂ ಚಂಚಲವೇ, ಅಂದರೆ ದೇಶ–

ಕಾಲ—ಪರಿಸ್ಥಿತ್ಯನುರೂಪ ಹೆಚ್ಚುಕಡಿಮೆಯಾಗತಕ್ಕದ್ದೇಆಗಿರುವದು. ಧರ್ಮದ ಮುಖ್ಯಾಂಶವಾದ ಧರ್ಮದ ಅಂತರಂಗದ ರಕ್ಷಣಕ್ಕೆ ಧರ್ಮದ ಬಹಿರಂಗವು ಬೇಲಿಯಂತೆ ಇರುತ್ತದೆಂದು ತಿಳಿಯತಕ್ಕದ್ದು.

**ಧರ್ಮದ ಬಹಿರಂಗದ ರೂಪಾಂತರ**—ಮೇಲೆ ಹೇಳಿದಂತೆ ದೇಶ-ಕಾಲ-ಪರಿಸ್ಥಿತ್ಯನುರೂಪವಾಗಿ ಧರ್ಮದ ಬಹಿರಂಗದಲ್ಲಿ, ಅಂದರೆ ಆಚಾರನಿಯಮಗಳಲ್ಲಿ ಹೆಚ್ಚುಕಡಿಮೆಯಾಗುವದು ಅಪರಿಹಾರ್ಯವಾಗಿದ್ದರೂ, ಆ ಹೆಚ್ಚುಕಡಿಮೆಯು ಅಧಿಕಾರಸಂಪನ್ನರಾದ ನಿಸ್ಪೃಹವೃತ್ತಿಯ ಅಲೌಕಿಕಶಕ್ತಿಯ ಮಹಾಜ್ಞಾನಿಗಳ ಶಾಸನರೂಪದಿಂದ ಆಗತಕ್ಕದ್ದಲ್ಲದೆ, ಸಿಕ್ಕವರು ಚಕ್ಕಂದದಿಂದ ಅದರಲ್ಲಿ ಕೈಹಾಕಿದರೆ ಅಪಾಯತಟ್ಟುವದು. ಅಂತಹಜ್ಞಾನಿಗಳು ಜಗತ್ಕಲ್ಯಾಣಕ್ಕಾಗಿ ಒಂದು ಹಿತಕಾರಕವಾದ ಸಾಮಾನ್ಯತತ್ವವನ್ನು ಅನುಸರಿಸಿ ಆ ಆಚಾರನಿಯಮಗಳಲ್ಲಿ ಹೆಚ್ಚುಕಡಿಮೆ ಮಾಡುವರು. ಆ ಹಿತಕಾರಕ ತತ್ವವೆಂದರೆ—"ವಿಷಯಸೇವನದ ನಾಶಕಾರಕವಾದಅತಿರೇಕಕ್ಕೆ ಪ್ರತಿಬಂಧವನ್ನುಂಟು ಮಾಡಬೇಕೆಂ"ಬದು. ವಿಷಯಾಸಕ್ತಿಯು ಮನುಷ್ಯಪ್ರಾಣಿಯ ಖೋಡಿಗುಣವಾದದ್ದರಿಂದ, ಅದು ಹೆಚ್ಚಿದಂತೆ ಅನಾಚಾರವು ಹೆಚ್ಚಿ ಮನುಷ್ಯನ ನಾಶವಾಗುತ್ತದೆ. ಅದ್ದರಿಂದ ಮನುಷ್ಯನ ವಿಷಯಾಸಕ್ತಿಯ ಅತಿರೇಕವಾದಾಗ ಅದಕ್ಕೆ ಪ್ರತಿಬಂಧವಾಗುವಂತೆ ಜ್ಞಾನಿಗಳು ಧರ್ಮದ ನಿಯಮಗಳನ್ನು ಹೊಸದಾಗಿ ಬಳಿಕೆಯಲ್ಲಿ ತರುವರು. ಬ್ರಾಹ್ಮಣರ ಪ್ರಾಚೀನಕಾಲದ ಮಾಂಸಭಕ್ಷಣ, ಅವರಲ್ಲಿಯ ವಿವಾಹದ ಅನಿರ್ಬಂಧತೆ, ಆಪತ್ಕಾಲದಲ್ಲಿ ಭಾವನ್ಮೈದುನರಿಂದ ಸಂತತಿಪಡೆಯುವದು ಮುಂತಾದವುಗಳು ಕಲಿಯುಗದಲ್ಲಿ ನಿಷೇಧವೆಂದು ನಿರ್ಬಂಧಿಸಿರುವದು ಇದಕ್ಕೆ ಉದಾಹರಣಗಳಾಗಿರುವವು; ಆದ್ದರಿಂದ ವೈದಿಕಧರ್ಮದ ಆಚಾರಭಾಗದಲ್ಲಿ ಹೆಚ್ಚುಕಡಿಮೆಮಾಡಬೇಕೆನ್ನುವವರು, ಅನಾಚಾರಕ್ಕೆ ಪ್ರತಿಬಂಧಮಾಡುವ ನಿಯಮಗಳನ್ನು ಬಳಿಕೆಯಲ್ಲಿ ತರಬೇಕಲ್ಲದೆ, ಅನಾಚಾರವು ಸಾರ್ವತ್ರಿಕವಾಯಿತೆಂದು ತಿಳಿದು, ಅದರ ಪ್ರಸ್ಥಾಪನೆಮಾಡುವ, ಅಥವಾ ಅದಕ್ಕೆ ಉತ್ತೇಜನಕೊಡುವ ನಾಶಕಾರಕ ನಿಯಮಗಳನ್ನು ಮಾಡಿ ಸ್ವಚ್ಛಂದವೃತ್ತಿಗೆ ಆಸ್ಪದಕೊಡಲಾಗದು; ಯಾಕೆಂದರೆ ಸ್ವಚ್ಛಂದವೃತ್ತಿಯಿಂದ ಮನುಷ್ಯತ್ವದ ನಾಶವಾಗಿ ಪಶುತ್ವವುಂಟಾಗುವದು.

**ಧರ್ಮದ ಬಾಧೆಗಳು**—ವಿಷಯಸೇವನದ ಅತಿರೇಕದಿಂದ ಮನುಷ್ಯರ ನಾಶವಾಗಬಾರದೆಂದು ಜಗತ್ತಿನ ಯಾವತ್ತು ಧರ್ಮಗಳು ವಿಷಯಸೇವನದ ಸಂಬಂಧದಿಂದ ಒಂದಿಲ್ಲೊಂದುಬಗೆಯ ವಿಧಿ–ನಿಷೇಧಾತ್ಮಕ ನಿಯಮಗಳ ನಿರ್ಬಂಧಗಳನ್ನು ಹಾಕಿಕೊಟ್ಟಿರುತ್ತವೆ. ಧರ್ಮವು ವಿಧಿಸಿರುವ ವಿಷಯಗಳನ್ನು ಧರ್ಮಿಷ್ಠ ಮನುಷ್ಯರು ಸೇವಿಸತಕ್ಕದ್ದು, ನಿಷೇಧಿಸಿದ ವಿಷಯಗಳನ್ನು ಬಿಡತಕ್ಕದ್ದು; ಇದರಿಂದ ಮನುಷ್ಯರ ಸ್ವಚ್ಛಂದದ ವಿಷಯಸೇವನದ ಹಿತಕಾರಕ ನಿಯಮನವಾಗುವದು. ಮನುಷ್ಯರು ತಮ್ಮ ತಮ್ಮ ಧರ್ಮಗಳ ವಿಧಿನಿಷೇಧದ ನಿಯಮಗಳನ್ನು ಅತಿಕ್ರಮಿಸತೊಡಗಲು, ಧರ್ಮಕ್ಕೆ—೧ ಧರ್ಮಗ್ಲಾನಿ. ೨ ಧರ್ಮಾಂತರ. ೩ ಧರ್ಮನಾಶ ಎಂಬ ಮೂರು ಬಾಧೆಗಳುಂಟಾಗುವವು. ಅದು ಹೇಗೆಂಬದನ್ನು ಕೆಳಗೆ ಸ್ವಲ್ಪದರಲ್ಲಿ ವಿವರಿಸಿರುತ್ತದೆ.

೧. **ಧರ್ಮಗ್ಲಾನಿ**—ಧರ್ಮದ ವಿಧಿನಿಷೇಧದ ನಿಯಮಗಳು, ಮನುಷ್ಯನ ಆಹಾರ, ವಿಹಾರ, ವ್ಯವಹಾರಗಳ ಸಂಬಂಧದವಾಗಿರುವವು; ಅಂದರೆ ಇಂಥ ಆಹಾರಗಳನ್ನು ಸ್ವೀಕರಿಸು, ಇಂಥ ಆಹಾರಗಳನ್ನು ಸ್ವೀಕರಿಸಬೇಡ; ಇಂಥಲ್ಲಿ ವಿಹರಿಸು, ಇಂಥಲ್ಲಿ ವಿಹರಿಸಬೇಡ; ಇಂಥ ವ್ಯವಹಾರವನ್ನು ಮಾಡು, ಇಂಥ ವ್ಯವಹಾರವನ್ನು ಮಾಡಬೇಡ ಎಂದು ಧರ್ಮವು ಮನುಷ್ಯನನ್ನು ನಿರ್ಬಂಧಿಸುತ್ತದೆ. ಈ ಧಾರ್ಮಿಕ ನಿರ್ಬಂಧಕ್ಕೆ ಒಳಗಾಗದೆ ಮನಸ್ಸಿಗೆ ಬಂದಂತೆ ನಡೆಯುವದೇ ಧರ್ಮಗ್ಲಾನಿಯೆನಿಸುವದು. ಧರ್ಮಗ್ಲಾನಿಯು ಕಾಯಿಕ, ವಾಚಿಕ, ಮಾನಸಿಕ ಎಂದು ಮೂರು ವಿಧವಾಗಿರುವದು. ವೇಷ—ಭೂಷಣ—ಆಹಾರ—ವಿಹಾರ—ವ್ಯವಹಾರಗಳನ್ನು ತನ್ನ ಧರ್ಮಕ್ಕನುಸರಿಸಿಮಾಡದೆ, ಪರಧರ್ಮದಂತೆ, ಅಥವಾ ತನ್ನ ಮನಸ್ಸಿನ ಅಭಿರುಚಿಯಂತೆ ಮಾಡುವದು ಕಾಯಿಕಧರ್ಮಗ್ಲಾನಿಯು; ವಾಣಿಯಿಂದ ತನ್ನ ಧರ್ಮವನ್ನು ತಾನು ಹೀಯಾಳಿಸುವದು ವಾಚಿಕಧರ್ಮಗ್ಲಾನಿಯು; ಧರ್ಮಾಚರಣೆಯಲ್ಲಿ ಮನಸ್ಸಿಲ್ಲದಿರುವದು ಮಾನಸಿಕ ಧರ್ಮಗ್ಲಾನಿಯು; ಆದರೆ ಇದಕ್ಕೆ ವಿರುದ್ಧವಾಗಿ, ಅಂದರೆ, ತನ್ನ ಧರ್ಮಕ್ಕನುಸರಿಸಿ ವೇಷ–ಭೂಷಣ–ಆಹಾರ–ವಿಹಾರ–ವ್ಯವಹಾರಗಳ ಅಂಗೀಕಾರಮಾಡುತ್ತಾ, ತನ್ನ ಧರ್ಮವೇ ತನಗೆ ತಾರಕವೆಂದು ಪ್ರತಿಪಾದಿಸುತ್ತಾ, ಮನಃಪೂರ್ವಕವಾಗಿ ತನ್ನ ಧರ್ಮ

ವನ್ನು ಪರಿಪಾಲಿಸುವವನು, ಅಂದರೆ ತ್ರಿಕರಣಪೂರ್ವಕ ಧರ್ಮವನ್ನು ಪರಿಪಾಲಿಸುವವನು ಪರಿಪೂರ್ಣಧರ್ಮಿಷ್ಠನೆಂದು ತಿಳಿಯಬೇಕು. ಈ ತ್ರಿಕರಣಗಳಲ್ಲಿ ಒಂದು ಕರಣದಿಂದ ಧರ್ಮಗ್ಲಾನಿಯು ತೋರಿದರೂ ಆ ಮಾನದಿಂದ ಮನುಷ್ಯನು ಧರ್ಮಭ್ರಷ್ಟನೆನಿಸುದನು. ಅದರಲ್ಲಿ, ಕಾಯಿಕ—ವಾಚಿಕ ಧರ್ಮಗ್ಲಾನಿಯುಳ್ಳವರು, ಅಂದರೆ ತೋರಿಕೆಯಲ್ಲಿಯೂ ಧರ್ಮವನ್ನು ಬಿಡುವವರು ಅತ್ಯಂತ ಧರ್ಮಭ್ರಷ್ಟರೆಂದು ತಿಳಿಯಬೇಕು; ಯಾಕಂದರೆ, ಲೋಕಲಜ್ಜಾಭಯಗಳಿಗಾಗಿಯೂ ಧರ್ಮವನ್ನು ಆಚರಿಸದೆ, ಕಂಠರವದಿಂದ ತನ್ನ ಧರ್ಮವನ್ನು ತಿರಸ್ಕರಿಸುತ್ತ “ ನಾನು ಧರ್ಮದಲ್ಲಿ ಮನಸ್ಸುಳ್ಳವನಾಗಿರುವೆನು, ಬಾಹ್ಯಾಡಂಬರವೇತಕ್ಕೆ? ” ಎಂದು ಅನ್ನುವವನ ಮಾತು ಮೋಸಗಾರಿಕೆಯದೆಂದು ತಿಳಿಯಬೇಕು; ಯಾಕಂದರೆ ಮನಸ್ಸಿನ ಧರ್ಮವಾಸನೆಯು ನಷ್ಟವಾಗುವದರಿಂದಲೇ ಮನುಷ್ಯನು ಕಾಯಿಕ—ವಾಚಿಕ ಧರ್ಮಗ್ಲಾನಿಯನ್ನು ಪಡೆಯುವನು. “ ಧರ್ಮೋನಿಹಂತಿ ಹಂತಾರಂ| ಧರ್ಮೋ ರಕ್ಷಿತಿ ರಕ್ಷಿತಃ ” ಅಂದರೆ ಧರ್ಮವು ತನ್ನನ್ನು ಕೊಲ್ಲುವವನನ್ನು ಕೊಲ್ಲುವದು, ತನ್ನನ್ನು ರಕ್ಷಿಸುವವನನ್ನು ರಕ್ಷಿಸುವದು ಎಂಬ ಸಿದ್ಧಾಂತವನ್ನು ಮರೆಯಲಾಗದು.

೨ **ಧರ್ಮಾಂತರ**—ತ್ರಿಕರಣಪೂರ್ವಕವಾದ ಧರ್ಮಗ್ಲಾನಿಯು ವ್ಯಕ್ತಿಯ, ಅಥವಾ ಸಮಾಜದ, ಅಥವಾ ರಾಷ್ಟ್ರದ ನಾಶಕಾರಕ ರೋಗವಾಗಿರುವದು. ಈ ಧರ್ಮಗ್ಲಾನಿಯ ಮಿತಿಯು ಮೀರಿದಾಗ “ ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ| ಅಭ್ಯುತ್ಥಾನಮಧರ್ಮಸ್ಯತದಾತ್ಮಾನಂ ಸೃಜಾಮ್ಯಹಂ ” ಎಂಬ ಭಗವದ್ಗೀತೆಯ ಉಕ್ತಿಯಂತೆ, ಧರ್ಮದಗ್ಲಾನಿಯಾಗಿ ಅಧರ್ಮದ ಅಭ್ಯುದಯವಾದಾಗ ದೇವರೇ ಅವತರಿಸಿ ಧರ್ಮವನ್ನು ಉದ್ಧರಿಸಿ, ಜಗತ್ತನ್ನು ರಕ್ಷಿಸುವನು. ಹೀಗೆ ಧರ್ಮಗ್ಲಾನಿರೂಪವಾದ ರೋಗಗ್ರಸ್ತವ್ಯಕ್ತಿಯ, ಅಥವಾ ಸಮಾಜದ, ಅಥವಾ ರಾಷ್ಟ್ರದ ಆ ರೋಗನಿವಾರಣಕ್ಕೆ ಅವತಾರಿಕರಾದ ಮಹಾಪುರುಷರ ಸಮಾಗಮವೇ ರಾಮಬಾಣಔಷಧವಾಗಿರುವದು. ಇಂಥ ಮಹಾಪುರುಷರು ಸ್ವಧರ್ಮದವರಾಗಿದ್ದರೆ ವ್ಯಕ್ತಿಮೊದಲಾದವುಗಳ ಸ್ವಧರ್ಮದ ಉತ್ಕರ್ಷವಾಗುವದು; ಪರಧರ್ಮದವರಾಗಿದ್ದರೆ, ಆ ವ್ಯಕ್ತಿ ಮೊದಲಾದವುಗಳ ಧರ್ಮಾಂತರವಾಗುವದು. ಧರ್ಮಾಂತರವೆಂದರೆ, ಸ್ವಧರ್ಮವನ್ನು ಬಿಟ್ಟು

ಅನ್ಯ ಧರ್ಮವನ್ನು ಸ್ವೀಕರಿಸುವದು.

"ಸ್ವಧರ್ಮೇನಿಧನಂ ಶ್ರೇಯಃ ಪರಧರ್ಮೋಭಯಾವಹಃ||" ಅಂದರೆ, ಸ್ವಧರ್ಮದಲ್ಲಿ ನಾಶಹೊಂದಿದರೂ ಶ್ರೇಯಸ್ಕರವು; ಆದರೆ ಪರಧರ್ಮ ಸ್ವೀಕಾರವು ಭಯಪ್ರದವು; ಎಂದು ಭಗವದ್ಗೀತೆಯ ಉಕ್ತಿಯು ಇರುವದು ನಿಜವು; ಆದರೆ ಮಹಾ ಪುರುಷರ ಕೃಪೆಯಿಂದ ಆದ ನಿಸ್ಪೃಹವೃತ್ತಿಯವರ ಧರ್ಮಾಂತರವು ಭಯಪ್ರದವಾಗದೆ, ಆಶೆ, ಒತ್ತಾಯ, ಮುರವತ್ತು, ಸ್ವಚ್ಛಂದ ಮೊದಲಾದ ಸ್ವಾರ್ಥವೃತ್ತಿಯವರ ಧರ್ಮಾಂತರವುಮಾತ್ರ ಭಯಪ್ರದವಾಗುವದು. ಎಲ್ಲ ಧರ್ಮಗಳು ಹೆಚ್ಚು ಕಡಿಮೆ ಪ್ರಮಾಣದಿಂದ ವಿಷಯಾಸಕ್ತಿಗೆ ನಿರ್ಬಂಧವನ್ನುಂಟುಮಾಡಿ ಜಗತ್ತಿನ ಕಲ್ಯಾಣವನ್ನೇ ಮಾಡುವದರಿಂದ, ಎಲ್ಲ ಧರ್ಮಗಳೂ ಮನುಷ್ಯನ ಅಧಿಕಾರದಂತೆ ಅವನ ಕಲ್ಯಾಣವನ್ನೇ ಮಾಡುತ್ತಿರಲು, ಯೋಗ್ಯರೀತಿಯಿಂದ ಆದ ಧರ್ಮಾಂತರದಿಂದ ಧರ್ಮನಾಶವಾಗದೆ ಧರ್ಮರಕ್ಷಣವೇ ಆಗುವದು. ಧರ್ಮವೆಂದರೆ ಶಿಸ್ತು ಎಂದು ಸಾಧಾರಣವಾಗಿ ಹೇಳಬಹುದಾದ್ದರಿಂದ, ಮನುಷ್ಯನು ತನ್ನ ಯೋಗ್ಯತೆಯಂತೆ ಯಾವ ಧರ್ಮದ ಶಿಸ್ತುಹಿಡಿದು ನಡೆದರೂ ಆ ಶಿಸ್ತಿನ ಯೋಗ್ಯತೆಯಂತೆ ಅವನ ಕಲ್ಯಾಣವು ಆಗಿಯೇ ತೀರುವದು. ಎಲ್ಲ ಧರ್ಮಗಳು ಅನಾದಿಯಾಗಿದ್ದು, ದೇಶಕಾಲ ಪರಿಸ್ಥಿತಿಗಳಿಗನುಸರಿಸಿ ಯಾವದೊಂದು ಧರ್ಮವು ಪ್ರಬಲವಾಗಿ ಇನ್ನೊಂದು ಧರ್ಮವು ದುರ್ಬಲವಾಗಬಹುದು; ಆದರೆ ಜನಹಿತವೇ ಎಲ್ಲ ಧರ್ಮಗಳ ಗುರಿಯಾಗಿರುದದರಿಂದ ಯಾವಧರ್ಮವೂ ತಿರಸ್ಕರಣೀಯವಲ್ಲವು.

ಜಗತ್ತಿನಲ್ಲಿ ಹಿಂದು, ಮುಸಲ್ಮಾನ, ಕ್ರಿಸ್ತಿ, ಬೌದ್ಧ, ಪಾರ್ಸಿ ಮೊದಲಾದ ಅನೇಕಧರ್ಮಗಳು ಬಳಿಕೆಯಲ್ಲಿರುವದಕ್ಕಿಂತ, ದೇವರಾಗಲಿ, ಮಹಾಪುರುಷರಾಗಲಿ ಒಂದೇ ಧರ್ಮವನ್ನು ಬಳಿಕೆಯಲ್ಲಿ ತಂದಿದ್ದರೆ ನೆಟ್ಟಗಾಗುತ್ತಿತ್ತೆಂದು, ಜಗತ್ತಿನ ಸ್ವರೂಪವರಿಯದ ಮಂದಮತಿಗಳು ಅನ್ನಬಹುದು; ಆದರೆ ಇವರ ಅಂಬೋಣವು, "ಶಾಲೆಯಲ್ಲಿ ವಿದ್ಯಾರ್ಥಿಗಳ ಕಲ್ಯಾಣಕ್ಕಾಗಿ ವಿವಿಧ ಇಯತ್ತೆಗಳನ್ನು ಬಳಿಕೆಯಲ್ಲಿ ತರುವದಕ್ಕಿಂತ, ಒಂದೇ ಇಯತ್ತೆಯನ್ನು ಬಳಿಕೆಯಲ್ಲಿ ತಂದಿದ್ದರೆ ನೆಟ್ಟಗಾಗುತ್ತಿತ್ತೆ"ಂದು ಅನ್ನುವ ಮೂರ್ಖರ ಅಂಬೋಣದಂತೆ ಅಸಮಂಜಸವಾಗಿರುವದು. ಶಾಲೆಯು ಭಿನ್ನ ಭಿನ್ನ ಯೋಗ್ಯತೆಯ ವಿದ್ಯಾರ್ಥಿಗಳುಳ್ಳದ್ದಾಗಿರುವಂತೆ, ಜಗತ್ತಾದರೂ ಭಿನ್ನ ಭಿನ್ನ ಅಧಿಕಾರಿಗಳ

ವರ್ಗಗಳುಳ್ಳದ್ದಾಗಿರುವದರಿಂದ, ಶಾಲೆಯಲ್ಲಿ ಭಿನ್ನ ಭಿನ್ನ ಇಯತ್ತೆಗಳಿರುವದು ವಿದ್ಯಾರ್ಥಿಗಳ ಕಲ್ಯಾಣದ ದೃಷ್ಟಿಯಿಂದ ಅವಶ್ಯವಿರುವಂತೆ, ಜಗತ್ತಿನಲ್ಲಿ ಭಿನ್ನ ಭಿನ್ನ ಧರ್ಮಗಳಿರುವದು ಜನತೆಯ ಕಲ್ಯಾಣ ದೃಷ್ಟಿಯಿಂದ ಅವಶ್ಯವಾಗಿರುವದು. ಧರ್ಮಸ್ಥಾಪಕರೆಲ್ಲರೂ ಮಹಾಮಹಿಮಾಶಾಲಿಗಳೇ ಆಗಿರುವದರಿಂದ, ಮನುಷ್ಯರು ತಮ್ಮ ತಮ್ಮ ಅಧಿಕಾರಕ್ಕನುಸರಿಸಿ ಆಯಾಧರ್ಮಸ್ಥಾಪಕರ ಧರ್ಮಗಳನ್ನು ಭಕ್ತಿಯಿಂದ ತ್ರಿಕರಣಪೂರ್ವಕ ಪಾಲಿಸಿದರೆ ದೊರೆಯುವ ಫಲಗಳು ಅವರವರ ಅಧಿಕಾರದಂತೆ ತೃಪ್ತಿಕರವಾಗಿಯೇ ಇರುವವು; ಆದ್ದರಿಂದ, ಯಾವಧರ್ಮದವರೇ ಆಗಲಿ ಪರಧರ್ಮಗಳನ್ನು ದ್ವೇಷಿಸದೆ ಅವುಗಳ ವಿಷಯದ ಸಹಾನುಭೂತಿಯನ್ನು ತಾಳಿ, ಸ್ವಧರ್ಮನಿಷ್ಠೆಯುಳ್ಳವರಾಗಬೇಕು. ಸ್ವಧರ್ಮನಿಷ್ಠೆ—ಪರಧರ್ಮಗಳ ಸಹಿಷ್ಣುತೆಗಳುಳ್ಳವರೇ ತಾಪರಹಿತ ಧರ್ಮನಿಷ್ಠರೆನಿಸುವರು.

೩ **ಧರ್ಮನಾಶ**—ಧರ್ಮಗ್ಲಾನಿರೂಪ ರೋಗನಿವಾರಣವು ಮಹಾಪುರುಷಸಹವಾಸದಿಂದ ಸ್ವಧರ್ಮೋತ್ಕರ್ಷರೂಪದಿಂದಾಗಲಿ, ಪರಧರ್ಮಸ್ವೀಕಾರರೂಪದಿಂದಾಗಲಿ ಆಗುತ್ತದೆಂದು ಮೇಲೆ ಹೇಳಿದೆಯಷ್ಟೆ? ಆದರೆ ಇವೆರಡೂ ಆಗದೆ ದುರ್ದೈವದಿಂದ ಕಲಿಸ್ವರೂಪರಾದ ದುಷ್ಟಪುರುಷರ ಸಹವಾಸದಿಂದ ವ್ಯಕ್ತಿಯಾಗಲಿ, ಸಮಾಜವಾಗಲಿ, ರಾಷ್ಟ್ರವಾಗಲಿ ಧರ್ಮಗ್ಲಾನಿಯ ಅತಿರೇಕವನ್ನು ಹೊಂದಿ, ಅಂದರೆ ಧರ್ಮನಿಂದಾಪೂರ್ವಕವಾಗಿ ಸ್ವಚ್ಛಂದವೃತ್ತಿಗೆ ಬಿದ್ದು, ತನ್ನ ಅವನತಿಯನ್ನು ಮಾಡಿಕೊಳ್ಳುವದು. ಶಾಶ್ವತವಾದ ಶಿಸ್ತು, ಅಥವಾ ವ್ಯವಸ್ಥೆಯು ಇಲ್ಲದನಡತೆಯೇ ಸ್ವಚ್ಛಂದವೃತ್ತಿಯು. ಇದರಿಂದ ರಾಷ್ಟ್ರಾದಿಗಳಲ್ಲಿ ಪರಪೀಡೆಯ ಪ್ರಾದುರ್ಭಾವವಾಗಿ, ಅವವುಗಳ ನಾಶಕ್ಕೆ ಆರಂಭವಾಗುವದು. ಇಂತಹ ಧರ್ಮಹೀನರಾದ ದುಷ್ಟಪುರುಷರ ಅಗ್ರೇಸರತ್ವವು ರಾಷ್ಟ್ರಕ್ಕೆ ದೊರೆಯಬೇಕಾದರೆ, ರಾಷ್ಟ್ರವು ಅದಕ್ಕೂ ಮೊದಲೇ ಅತ್ಯಂತ ಧರ್ಮಗ್ಲಾನಿಯನ್ನು ಹೊಂದಿರಬೇಕಾಗುವದು. ಹಾಗಾಗಿರದಿದ್ದರೆ ಇಂತಹ ಧರ್ಮವಿಧ್ವಂಸಕರ ಬೇಳೆಯು ಬೇಯಲಾರದು. ಇವರು ಜನತೆಯನ್ನು ಯಾವದೊಂದು ದುರಾಶೆಗೆ ಗುರಿಮಾಡಿ, ಜಗತ್ತಿನ ಸ್ವಚ್ಛಂದವೃತ್ತಿಗೂ, ಕಿಡಿಗೇಡಿತನಕ್ಕೂ ಉತ್ತೇಜನಕೊಡುತ್ತ ಜನತೆಯಲ್ಲಿ “ ನಹಿಂದುರ್ನಯವನಃ ” ಎಂಬಂತಹ ಅನವಸ್ಥೆಯನ್ನುಂಟುಮಾಡಿ, ಮನುಷ್ಯರಲ್ಲಿ ಪಶುತ್ವವನ್ನುಂಟು

ಮಾಡುವವರೆಂದು ನಿರ್ವಿವಾದವಾಗಿ ಹೇಳಬಹುದು; ಆದ್ದರಿಂದ ವಿವೇಕಿಗಳಾದವರು ಇಂಥವರ ಮಾತಿಗೆ ಕಿವಿಗೊಡದಂತೆ ಎಚ್ಚರಪಡುವದಕ್ಕಾಗಿ ಆ ಧರ್ಮವಿಧ್ವಂಸಕರ ಕೆಲವು ಲಕ್ಷಣಗಳನ್ನು ಇಲ್ಲಿ ಹೇಳುವದು ಅವಶ್ಯವಾಗಿರುವದು.

**ಧರ್ಮವಿಧ್ವಂಸಕರ ಲಕ್ಷಣಗಳು**—(೧)ಇವರಿಗೆ ಅಭಿಮಾನತಃ ತಮ್ಮದೆಂದು ಹೇಳಿಕೊಳ್ಳುವಧರ್ಮವೇ ಇರುವದಿಲ್ಲ. ಅಂದರೆ ಇವರನ್ನು ಇಂಥ ಧರ್ಮದವರೆಂದು ಹೇಳಲಿಕ್ಕೆ ಅವರ ನಾಟಕೀಯಸ್ವರೂಪ–ಆಚರಣಗಳಿಂದ ಹೇಳಲಿಕ್ಕೆ ಬರುವದಿಲ್ಲ. (೨) ತಮ್ಮದೊಂದು ಹೊಸಧರ್ಮವನ್ನು ಸ್ಥಾಪಿಸಿ ಅದರಲ್ಲಿ ಲೋಕಸಂಗ್ರಹಮಾಡಿಕೊಳ್ಳುವಷ್ಟು ದೈವೀಸಾಮರ್ಥ್ಯವೂ, ಪ್ರಭಾವಶಾಲಿತ್ವವೂ, ತಮ್ಮ ಮತದ ಸತ್ಯತೆಯನ್ನು ಪ್ರಸ್ಥಾಪಿಸುವ ಗ್ರಂಥಗಳನ್ನು ಬರೆಯುವ ಪಾಂಡಿತ್ಯವೂ ಇವರಲ್ಲಿ ಇಲ್ಲದ್ದರಿಂದ, ಆ ಧರ್ಮದ್ದೊಂದು ಮಾತನ್ನು ಈ ಧರ್ಮದ್ದೊಂದು ಮಾತನ್ನು ಲಹರಿಯಮೇಲೆ ಒಮ್ಮೆ ಸ್ತುತಿಸುತ್ತ ಒಮ್ಮೆ ನಿಂದಿಸುತ್ತ ತಮ್ಮ ಲೋಕವಿಲಕ್ಷಣಗಳಾದ ಘಾತಕ ಹೊಸಮತಗಳನ್ನು ನಡನಡುವೆ ಪೂರ್ವಾಪರ ಏಕವಾಕ್ಯತೆಯಿಲ್ಲದೆ ಭಾಷಣಾದಿಗಳಲ್ಲಿ ಪ್ರಕಟಿಸುತ್ತ ಯಾವತ್ತು ಧರ್ಮದ ಜನರಲ್ಲಿ ಬುದ್ಧಿಭೇದಮಾಡಿ ಅವರ ಧರ್ಮಶ್ರದ್ಧೆಯನ್ನು ಹಾಳುಮಾಡಿ ಸರ್ವತ್ರಸ್ವಚ್ಛಂದವೃತ್ತಿಗೆ ಆಸ್ಪದಕೊಡುವರು. ಒಟ್ಟಿಗೆ, ಇವರು ತಾರಕವಾದ ಒಂದು ಧರ್ಮವನ್ನು ಜನತೆಗೆ ತೋರಿಸದೆ, ಇದ್ದ ಧರ್ಮಗಳೊಳಗಿನ ಶ್ರದ್ಧೆಯನ್ನು ನಷ್ಟಪಡಿಸಿ ಜನತೆಯನ್ನು ಅತಂತ್ರವಾಗಮಾಡುವರು. (೩)ಇವರು ದುರಹಂಕಾರಿಗಳಾಗಿರುವದರಿಂದ, ನಾವು ಎಲ್ಲವನ್ನು ಬಲ್ಲೆವೆಂದು ಎಗ್ಗಿಲ್ಲದೆ ಹೇಳುವರು; ನಾವು ಇಂತಹದೊಂದು ಕಾರ್ಯವನ್ನು ಇಷ್ಟುದಿವಸಗಳಲ್ಲಿ ಮಾಡುವೆವೆಂಡು ಜಗತ್ತಿನ ಕರ್ತಾರರಂತೆ ಖಂಡಿತವಾಗಿ ಪ್ರಸಿದ್ಧಮಾಡುವರು; ಪ್ರಾಚೀನ ಪೂಜ್ಯಗ್ರಂಥಗಳ ವಿಷಯದಲ್ಲಿ ಸುಟ್ಟುಸೂರೆಗೊಳ್ಳುವಷ್ಟರಮಟ್ಟಿಗೆ ಅನಾದರವನ್ನು ತೋರಿಸುವರು. ತಾವು ತತ್ವತಃ ನಯಭಯರಹಿತರಾಗಿದ್ದು, ವ್ಯವಹಾರತಃ ನಾವು ಹಾಗೆ ಇರುವೆವೆಂದು ಹಾವಭಾವಾದಿಗಳಿಂದ ನಟಿಸುತ್ತ, ಜನತೆಯು ನಯ–ಭಯ–ಭಕ್ತಿ–ಭಾವಗಳಿಲ್ಲದ್ದಾಗುವಂತೆ ಯಾರಹಂಗಿಲ್ಲದೆ ತಮ್ಮ ಅಧಿಕಾರಾತಿಕ್ರಮಮಾಡಿ ಜನತೆಯನ್ನು ಕಂಠರವದಿಂದ ಜೋಧಿಸುವರು. (೪) ಇವರು

ಕ್ಷಣಕ್ಕೊಂದು ಹಾದಿಯತೋರಿಸುವರು. ತಾವು ಬಹು ಸತ್ಯವಂತರೂ, ನಿಸ್ಪೃಹಿಗಳೂ ಎಂದು ತೋರಿಸುವದಕ್ಕಾಗಿ ವ್ಯವಹಾರಕ್ಕೆ ಅಸಹ್ಯವಾಗಿ ತೋರುವ ಮುಂದಿಯ ದೋಷಗಳನ್ನು ನಾಚಿಕೆಯಿಲ್ಲದೆ ಜನರು ನೊಂದಾರು ಬೆಂದಾರು ಎಂಬದರ ಲಕ್ಷವಿಲ್ಲದೆ ನಿಷ್ಕಾರಣ ಜಗತ್ತಿನಮುಂದಿಟ್ಟು, ಜನರಲ್ಲಿ ಜಿಗುಪ್ಸೆಯನ್ನುಂಟುಮಾಡುವರು. (೫) ಇವರಲ್ಲಿ ಕಾರ್ಯಕ್ಷಮತೆಗಿಂತ ಕಾರ್ಯವಿಘಾತಕತೆಯು ಹೆಚ್ಚು ಇರುವದು. (೬) ಇವರು ಲೋಕರಂಜನಾರ್ಥವಾಗಿ ದೀನಪಕ್ಷವನ್ನೂ, ದುರ್ಬಲಪಕ್ಷವನ್ನೂ, ಪತಿತಪಕ್ಷವನ್ನೂ ವಹಿಸಿ, ತಾವು ಪತಿತೋದ್ಧಾರಕರೆಂದು ಹೆಮ್ಮೆಪಡುತ್ತ, ದೀನರನ್ನು ದಾನಿಗಳನ್ನಾಗಿಯೂ, ದುರ್ಬನರನ್ನು ಬಲಿಷ್ಠರನ್ನಾಗಿಯೂ, ಅಪವಿತ್ರರನ್ನು ಪವಿತ್ರರನ್ನಾಗಿಯೂ ಮಾಡಲಾರದೆ, ಅದರ ಹೊಯ್ಲುವನ್ನು ಅರಿಯದೆ, ದಾನಿಗಳು ದೀನರೂ, ಬಲಿಷ್ಠರು ದುರ್ಬಲರೂ, ಪವಿತ್ರರು ಅಪವಿತ್ರರೂ ಆಗಲಿಕ್ಕೆ ಮಾತ್ರ ಆಸ್ಪದವನ್ನುಂಟುಮಾಡಿ, ಸಬ್‌ಗೋಲಂಕಾರಮಾಡುವ ಪಾತಕಕ್ಕೆ ಗುರಿಯಾಗುವರು. (೭) ಚಾಂಚ್ಯ–ವೈವಿಧ್ಯಗಳುಳ್ಳ ಸೃಷ್ಟಿಯಲ್ಲಿಯ ಧರ್ಮ, ಜಾತಿ, ಆಚಾರ, ವ್ಯವಹಾರ, ಸ್ಥಿತಿಗತಿ, ಮುಂತಾದವೆಲ್ಲ ಉತ್ಕರ್ಷಾಪಕರ್ಷ ಚಂಚಲವಾಗಿಯೂ, ವಿವಿಧವಾಗಿಯೂ ಆಗಿರುವದು ಅಪರಿಹಾರ್ಯವೆಂಬ ಸಿದ್ಧಾಂತವನ್ನು ಅರಿಯುವಷ್ಟು ಪ್ರಾಂಜಲತ್ವವೂ, ತಾಳ್ಮೆಯೂ ಇಲ್ಲದ್ದರಿಂದ, ಇವರು ಅವೆಲ್ಲವುಗಳಿಗೆ ಏಕರೂಪತೆಕೊಡುವ ಅಟ್ಟಹಾಸವನ್ನು ಮಾಡಹೋಗಿ, ಜನತೆಯ ತಾಪವನ್ನೂ, ಅತಂತ್ರತೆಯನ್ನೂ ಮಾತ್ರ ಹೆಚ್ಚಿಸಿದ ದ್ರೋಹಕ್ಕೆ ಗುರಿಯಾಗುವರು. (೮) ಸ್ವಭಾವತಃ ಇವರು ನಾಸ್ತಿಕರೇ ಅಲ್ಲ, ಸ್ವೇಚ್ಛಾಚಾರ ಪ್ರಿಯರು ಆಗಿರುವದರಿಂದ, ದೇವತೆಗಳ ಅವತಾರಾದಿಗಳನ್ನೂ, ಮಹಾಶಾಲಿಗಳ ಮಹಿಮೆಯನ್ನೂ ಒಪ್ಪುವದಿಲ್ಲ; ತಮ್ಮಲ್ಲಿಲ್ಲದ ಮಹಿಮೆಯು ಅನ್ಯರಲ್ಲಿರಲಾರದೆಂಬಭಾವವು ಈ ದುರಹಂಕಾರಿಗಳಲ್ಲಿರುವದರಿಂದ, ಇವರು ಈ ದೈವೀದ್ರೋಹಕ್ಕೆ ಗುರಿಯಾಗುವರು.

ವಿವೇಕಿಗಳಾದ ಧರ್ಮಿಷ್ಠರು ಧರ್ಮವಿಧ್ವಂಸಕರ ಇವೇಮೊದಲಾದ ಅಹಂಕಾರದ್ಯೋತಕ ಲಕ್ಷಣಗಳನ್ನು ಗುರುತಿಸಿ ಜಾಗರೂಕತೆಯ ನಿರ್ಧಾರದಿಂದ ತಮ್ಮತಮ್ಮ ಧರ್ಮಗಳಂತೆ ನಡೆದುಕೊಳ್ಳದೆ ಯಾವದೊಂದುಲಾಭದ ದುರಾಶೆಗೆಬಿದ್ದು ಈ ಧರ್ಮವಿಧ್ವಂಸಕರ ಬೆನ್ನುಹತ್ತಿದರೆ ನಿಶ್ಚಯವಾಗಿ ಧರ್ಮನಾಶದ ಶಳವಿಗೆ ಬೀಳುವ ಸಂಭವವಿರುವದು.

**ಧಾರ್ಮಿಕತೆ**—ಧರ್ಮಕ್ಕೆ ಬಾಧೆಗಳು ಧರ್ಮಗ್ಲಾನಿ, ಧರ್ಮಾಂತರ, ಧರ್ಮನಾಶ ಎಂದು ಮೂರು ಇರುತ್ತವೆಂದು ಮೇಲೆ ಹೇಳಿದೆಯಷ್ಟೆ? ಈ ಮೂರೂಬಾಧೆಗಳ ಹಣಿತಕ್ಕೂ ಹಣಿಯದೆ ಸ್ವಧರ್ಮದಲ್ಲಿ ನಿಷ್ಠೆಯನ್ನೂ, ಪರಧರ್ಮಗಳ ವಿಷಯದಲ್ಲಿ ಸಹಿಷ್ಣುತೆಯನ್ನೂ ತಾಳುವವರೇ ಧಾರ್ಮಿಕರು. ಅಂತಹ ಧಾರ್ಮಿಕಭಾವಕ್ಕೆ ಅಂದರೆ ಸ್ವಧರ್ಮನಿಷ್ಠೆ-ಪರಧರ್ಮಸಹಿಷ್ಣುತೆಯ ಮನಸಿಗೆ ಧಾರ್ಮಿಕತೆಯೆನ್ನುವರು.

**ಸೌಜನ್ಯ**-ದೌರ್ಜನ್ಯಗಳು—ತನಗೂ ಪರರಿಗೂ ಸಂತೋಷವಾಗುವಂತೆ ನಡೆಯುವವರು ಸುಜನರು. ಅಂತಹ ಸುಜನರ ಭಾವಕ್ಕೆ, ಅಂದರೆ ಸುಜನರ ಸ್ವಪರ-ಸಂತೋಷಜನಕವೃತ್ತಿಗೆ ಸೌಜನ್ಯವೆನ್ನುವರು. ಮನುಷ್ಯನಲ್ಲಿ ನಿಜವಾದ ಸೌಜನ್ಯವುಂಟಾಗಬೇಕಾದರೆ ಆತನು ಅಹಂಕಾರರಹಿತನಾಗಿರಬೇಕು. ಅಂದರೆ ಆತನು ಕರ್ತೃತ್ವಾಭಿಮಾನವನ್ನು ತ್ಯಜಿಸಿ ಎಲ್ಲದರ ಕರ್ತೃವು ಪರಮೇಶ್ವರನೆಂತಲೂ, ಆ ಪ್ರಭು ಪರಮೇಶ್ವರನ ಅಪ್ಪಣೆಯಾದ ಧರ್ಮದಂತೆ ನಡೆಯುವದು ತನ್ನ ಕರ್ತವ್ಯವೆಂತಲೂ ತಿಳಿದು ಅದರಂತೆ ನಡೆಯುವವನಾಗಿರಬೇಕು. ಇಂಥವರೇ ಸುಜನರು. ಇದಕ್ಕೆ ವಿರುದ್ಧವಾಗಿ ನಡೆಯುವವರು, ಅಂದರೆ ಸುಖಕ್ಕಾಗಿ ಕರ್ತೃತ್ವಾಭಿಮಾನದಿಂದ ಧರ್ಮಾಧರ್ಮ ವಿಚಾರವಿಲ್ಲದೆ, ದೇವರನ್ನು ಲೆಕ್ಕಿಸದೆ ಮನಸ್ಸಿಗೆ ಬಂದಂತೆ ಎಡತಾಕುವವರು ದುರ್ಜನರು. ಸಜ್ಜನರು ಧರ್ಮಕ್ಕಾಗಿ ತಮ್ಮ ಕರ್ತವ್ಯವೆಂದು ಸೌಜನ್ಯವನ್ನು ತೋರಿಸಿದರೆ, ದುರ್ಜನರು ಸ್ವಾರ್ಥಕ್ಕಾಗಿ ತಮ್ಮ ಕಾರ್ಯ ಸಾಧನೆಯೆಂದು ಸೌಜನ್ಯವನ್ನು ತೋರಿಸುವರು. ತನ್ನ ಹಿತವು ಸ್ವಾರ್ಥವಾಗಿರುವಂತೆ ತನ್ನವರ, ತನ್ನ ಸಮಾಜದ, ತನ್ನ ರಾಷ್ಟ್ರದ ಹಿತವೂ ಸ್ವಾರ್ಥವೇ ಆಗಿರುತ್ತದೆಂಬದನ್ನು ಇಲ್ಲಿ ಲಕ್ಷದಲ್ಲಿಡತಕ್ಕದ್ದು; ಯಾಕಂದರೆ ತನ್ನ ಹಿತವು ಸಂಕುಚಿತಸ್ವಾರ್ಥವಾಗಿದ್ದರೆ ತನ್ನವರ ಹಾಗು ತನ್ನರಾಷ್ಟ್ರಾದಿಗಳ ಹಿತವು ವಿಸ್ತೃತಸ್ವಾರ್ಥವಾಗಿರುವದು. ಈ ಸಂಕುಚಿತ-ವಿಸ್ತೃತ ಸ್ವಾರ್ಥಪರತೆಗಳಿಗೇ ಜ್ಞಾನಿಗಳು ಕ್ರಮವಾಗಿ ಅಹಂಕಾರ-ಮಮಕಾರಗಳೆನ್ನುವರು. ಈ ಅಹಂಕಾರ-ಮಮಕಾರಗಳ ಎಳತಕ್ಕೆ ಸಿಕ್ಕವರ ಸ್ವಾರ್ಥತ್ಯಾಗವಾಗಲಿ, ಸೌಜನ್ಯವಾಗಲಿ ಶುದ್ಧವಾದವುಗಳಲ್ಲ. ಯಾಕಂದರೆ ಅವು ಮೇಲೆ ಹೇಳಿದಂತೆ ಸ್ವಾರ್ಥದೂಷಿತಗಳು, ಅತಏವಸಹೇತುಕಗಳು ಆಗಿರುವವು. ಈ ಅಹಂಕಾರ ದೂಷಿತರು ಬಹಳವಾ-

ವರೆ ನೀತಿವಂತರಿರಬಹುದು; ಆದರೆ ನೀತಿವಂತರಿಗೆ ಧರ್ಮಿಷ್ಠರ ಯೋಗ್ಯತೆಯು ಬರಲಾರದು. ಕೇವಲ ನೀತಿಯ ಆಚರಣೆಯಿಂದ, ಅಂದರೆ ಅವರ ಒರಟ ನೀತಿಯಿಂದ ಜಗತ್ತಿನ ಧಾರಣೆಯಾಗಲಿಕ್ಕಿಲ್ಲ; ಯಾಕಂದರೆ ಜಗತ್ತನ್ನು ಪರಮೇಶ್ವರನು ನೀತಿ—ಅನೀತಿ, ಪಾಪ—ಪುಣ್ಯ, ಒಳಿತು—ಕೆಡಕು ಮೊದಲಾದ ದ್ವಂದ್ವಗಳ ಮಿಶ್ರಣದಿಂದ ನಿರ್ಮಿಸಿರುವದರಿಂದ, ಕೇವಲ ನೀತಿಯನ್ನಾಗಲಿ, ಕೇವಲ ಅನೀತಿಯನ್ನಾಗಲಿ ಆಚರಿಸಿದರೆ ಜಗತ್ತು ಉಳಿಯಲಿಕ್ಕಿಲ್ಲ; ಆದರೆ ಧರ್ಮಾಚರಣೆಯಿಂದ ಜಗತ್ತಿನ ಧಾರಣೆಯಾಗುತ್ತದೆಂದು ಮೇಲೆ ಹೇಳಿರುತ್ತದೆ; ಆದ್ದರಿಂದ ನೀತಿಗಿಂತ ಧರ್ಮವು ಜಗದ್ಧಾರಣ ದೃಷ್ಟಿಯಿಂದ ಹೆಚ್ಚು ಉಪಯುಕ್ತವಾದದ್ದೂ, ವ್ಯಾಪಕವಾದದ್ದೂ ಇರುವದು; ಅಂದರೆ ಧರ್ಮದ ಹೊಟ್ಟೆಯಲ್ಲಿ ನೀತಿಯು ಹಿಡಿಯುವದು; ಆದರೆ ನೀತಿಯ ಹೊಟ್ಟೆಯಲ್ಲಿ ಧರ್ಮವು ಹಿಡಿಸಲಾರದು. ಕೇವಲ ಒರಟನೀತಿಯುವರು ಎಂತಹ ನೀತಿವಂತರಿದ್ದರೂ, ಅವರು ಈಶ್ವರನ, ಅರ್ಥಾತ್ ಧರ್ಮದ ಅಧಿಷ್ಠಾನವಿಲ್ಲದವರಾಗಿದ್ದರೆ ಅವರ ಅಹಂಕಾರವು ನಷ್ಟವಾಗಲಾರದು.

**ಧಾರ್ಮಿಕತೆಯೇ ನಿಜವಾದ ಸೌಜನ್ಯವು**—ಮೇಲಿನ ಹಲವು ಸಂಗತಿಗಳ ವಿವರಣೆಯಿಂದ ಸ್ಪಷ್ಟವಾಗಿ ಹೇಳುವದೇನಂದರೆ—ಧಾರ್ಮಿಕರು ಕರ್ತವ್ಯಬುದ್ಧಿಯಿಂದ ಧರ್ಮದಂತೆ ನಡೆಯುವದರಿಂದ, ನಿಜವಾದ ಧರ್ಮಿಷ್ಠರಿಗೆ ಅಹಂಕಾರದೋಷವು ತಟ್ಟದು. ಅವರು ತಮ್ಮ ಸೌಜನ್ಯವನ್ನು ಧರ್ಮದೃಷ್ಟಿಯಿಂದ ತೋರಿಸುವರಲ್ಲದೆ, ಸ್ವಾರ್ಥದೃಷ್ಟಿಯಿಂದ, ಅಂದರೆ ಅನ್ಯರ ಭಯದಿಂದ, ಅಥವಾ ಅನ್ಯರಿಗೆ ಪ್ರಿಯರಾಗುವ ಇಚ್ಛೆಯಿಂದ, ಅಥವಾ ಅನ್ಯರಿಂದ ಏನಾದರೂ ಸಂಪಾದಿಸುವದಕ್ಕಾಗಿ ಸೌಜನ್ಯವನ್ನು ತೋರಿಸುವದಿಲ್ಲ. ಆದರೆ ಸಂಕುಚಿತ ಅಥವಾ ವಿಸ್ತೃತ ಸ್ವಾರ್ಥದಲ್ಲಿ ಮಗ್ನರಾದ ಅಧಾರ್ಮಿಕರು ಸೌಜನ್ಯವನ್ನು ಧಾರ್ಮಿಕರಂತೆ ಕರ್ತವ್ಯಬುದ್ಧಿಯಿಂದ ತೋರಿಸದೆ, ಮೇಲೆ ಹೇಳಿದ ಸ್ವಾರ್ಥದ ದೃಷ್ಟಿಯ ಕ್ಷುದ್ರಹೇತುಗಳಿಗಾಗಿ, ಅಂದರೆ ಅನ್ಯರ ಭಯ, ಅನುವರ್ತನ, ಪ್ರಯೋಜನಾದಿಗಳಿಗಾಗಿ ತೋರಿಸುವರು. ಧಾರ್ಮಿಕರಧರ್ಮವು ಸ್ಥಿರವೂ, ಪವಿತ್ರವೂ ಆಗಿರುವದರಿಂದ ಅವರ ಸೌಜನ್ಯವೂ ಸ್ಥಿರವೂ, ಪವಿತ್ರವೂ ಆಗಿರುವದು;ಆದರೆ ಸ್ವಾರ್ಥಪರಾಯಣರ ಸ್ವಾರ್ಥವು ಚಂಚಲವೂ, ಅಪವಿತ್ರವೂ ಆಗಿರುವದರಿಂದ ಅವರ ಸೌಜನ್ಯವೂ ಚಂಚಲವೂ, ಅಪವಿತ್ರವೂ,

ಅಂತೇ ಮೋಸಗಾರಿಕೆಯದು ಆಗಿರುವದು. ಈಮಾತಿಗೆ ಧರ್ಮಪ್ರಭು ವಾದ ಶ್ರೀಕೃಷ್ಣನ, ಹಾಗು ಧರ್ಮಮೂರ್ತಿಯಾದ ಧರ್ಮರಾಜನ, ಹಾಗು ಅಧರ್ಮಿಷ್ಠನಾದ ದುರ್ಯೋಧನನ ಸೌಜನ್ಯದ ಉದಾಹರಣಗಳನ್ನು ಕೆಳಗೆ ಕೊಟ್ಟಿರುತ್ತದೆ.

**ಶ್ರೀಕೃಷ್ಣನ ಧಾರ್ಮಿಕ ಸೌಜನ್ಯವು**—ಶ್ರೀಕೃಷ್ಣನು ದೇವರ ಅವತಾರವೆಂದು ಭಾವಿಕರಾದ ವೈದಿಕರಿಗೆ ಹೇಳುವಕಾರಣವಿಲ್ಲ; ಆದರೆ ಆತನು ಮನುಷ್ಯನಾಗಿ ಅವತರಿಸಿದ್ದರಿಂದ, ಅಂದರೆ ಮಾನವ ದೇಹವನ್ನು ಧರಿಸಿ ದೇವತ್ವದ ಕೆಳಗಿನ ಮನುಷ್ಯತ್ವ ತಾಳಿದ್ದರಿಂದ ಆತನು ತನ್ನ ಮಾನವಜಾತಿಯ ಕ್ಷತ್ರಿಯ ಧರ್ಮದಂತೆ ಹಿರಿಯರು-ಕಿರಿಯರು, ದೇವರು-ಬ್ರಾಹ್ಮಣರು, ಶ್ರೇಷ್ಠರು-ಕನಿಷ್ಠರು ಎಂಬಿವೇ ಮೊದಲಾದ ಧಾರ್ಮಿಕ ತಾರತಮ್ಯಗಳನ್ನನು ಸರಿಸಿ ನಡೆದಿರುವನು; ಆದ್ದರಿಂದಲೇ ಆತನು ತನಗೆ ಕೇವಲ ಹಿರಿಯತನದಿಂದ ಮಾತ್ರ ಪೂಜ್ಯಳಾಗಿದ್ದ ತನ್ನ ಸೋದರತ್ತೆಯಾದ ಕುಂತಿಯನ್ನು ಕಿರಿಯನಾಗಿದ್ದ ತಾನು ಕರ್ತವ್ಯಬುದ್ಧಿಯಿಂದ ಒಬ್ಬ ಸಾಮಾನ್ಯ ಮನುಷ್ಯನಂತೆ ಹಿಂದೆ ಸಭಾಪರ್ವದ೨೦ನೇಪುಟದಲ್ಲಿಯೂ, ಅಂತಹಬೇರೆ ಬೇರೆ ಪ್ರಸಂಗಗಳಲ್ಲಿಯೂನಮಸ್ಕರಿಸಿರುವನು. ಇದರಿಂದ ಶ್ರೀಕೃಷ್ಣನ ಧಾರ್ಮಿಕವಾದ ಸೌಜನ್ಯವುಚನ್ನಾಗಿ ವ್ಯಕ್ತವಾಗುವದು. ಶ್ರೀಕೃಷ್ಣನು ಅಲೌಕಿಕ ಪುರುಷನೆಂಬದು ಕುಂತಿಗೂ, ತಾನು ಅದ್ವಿತೀಯ ಮಹಿಮಾಶಾಲಿಯೆಂಬದು ಶ್ರೀಕೃಷ್ಣನಿಗೂ ಗೊತ್ತಿದ್ದರೂ, ಶ್ರೀಕೃಷ್ಣನು ತನಗಿಂತ ಕಿರಿಯನಾದದ್ದರಿಂದ ಧರ್ಮತಃ ತನಗೆ ನಮಸ್ಕಾರ ಮಾಡುವದು ಆತನ ಕರ್ತವ್ಯವೆಂದು ಕುಂತಿಯು ತಿಳಿದಿದ್ದಳು; ಅದರಂತೆ ತಾನು ಎಂತಹ ಅದ್ವಿತೀಯ ಮಹಿಮಾಶಾಲಿಯಾಗಿದ್ದರೂ, ಚಿಕ್ಕವನಾದದ್ದರಿಂದ ಹಿರಿಯಳಾದ ಕುಂತಿಗೆ ನಮಸ್ಕಾರಮಾಡುವದು ಧರ್ಮತಃ ತನ್ನ ಕರ್ತವ್ಯವೆಂದು ಶ್ರೀಕೃಷ್ಣನು ತಿಳಿದಿದ್ದನು. ಹೀಗೆ ಇಬ್ಬರೂ ಧರ್ಮಿಷ್ಠರಾದದ್ದರಿಂದ ಅವರ ನಮಸ್ಕಾರಮಾಡುವದೂ, ನಮಸ್ಕಾರ ಮಾಡಿಸಿಕೊಳ್ಳುವದೂ ಅವರ ಸಂಕೋಚಕ್ಕೆ ಕಾರಣವಾಗದಿರಲು, ಇಬ್ಬರೂ ನಮಸ್ಕಾರ ರೂಪಕ್ರಿಯೆಯಿಂದ ಸಂತೋಷಭರಿತರಾದದ್ದರಿಂದ ಅವರ ಸೌಜನ್ಯವು ನಿಜವಾದ ಸೌಜನ್ಯವೆನಿಸುವದು.

ಹಿರಿಯತನವೊಂದರಹೊರತು ಬೇರೆ ಯಾವ ದೃಷ್ಟಿಯಿಂದಲೂ

ಕುಂತಿಯು ಶ್ರೀಕೃಷ್ಣನಿಗೆ ಪೂಜ್ಯಳಾಗಿದ್ದಿಲ್ಲವು. ಮನುಷ್ಯರ ಶ್ರೇಷ್ಠತ್ವ–ಕನಿಷ್ಠತ್ವಗಳನ್ನು ನಿರ್ಣಯಿಸುವ ದೃಷ್ಟಿಗಳು— ೧ ದೇಹದೃಷ್ಟಿ. ೨ ಕರ್ಮದೃಷ್ಟಿ. ೩ ಗುಣದೃಷ್ಟಿ. ೪ ಆತ್ಮದೃಷ್ಟಿ ಎಂಬ ನಾಲ್ಕು ಬಗೆಯವಾಗಿರುವವು. ದೇಹದೃಷ್ಟಿಯಿಂದ ಶ್ರೀಕೃಷ್ಣ–ಕುಂತಿ ಇವರನ್ನು ಒರೆಹಚ್ಚಿ ನೋಡಿದರೆ, ಶ್ರೀಕೃಷ್ಣನ ಅಲೌಕಿಕ ದೇಹವು ಯೋಗಿಗಳಿಗೂ ಮೋಹಕವಾದದ್ದರಿಂದ, ಅದು ಕುಂತಿಯ ಲೌಕಿಕ ದೇಹಕ್ಕಿಂತ ಶ್ರೇಷ್ಠತರವಾದದ್ದಿರುವದು. ಅದರಂತೆ ಜಗತ್ಕಾರಣನಾದ ಶ್ರೀಕೃಷ್ಣನು ಜಗತ್ತಿನ ಸೃಷ್ಟಿ–ಸ್ಥಿತಿ–ಲಯಗಳ ಕರ್ತೃವಾದ್ದರಿಂದ ಆತನ ಈ ಅಲೌಕಿಕ ಕರ್ಮಗಳು, ಕುಂತಿಯ ಲೌಕಿಕ ಕರ್ಮಗಳಿಗಿಂತ ಶ್ರೇಷ್ಠತಮಗಳಾಗಿರುವವು. ಅದರಂತೆ ಷಡ್ಗುಣೈಶ್ವರ್ಯಸಂಪನ್ನನಾಗಿದ್ದ ಶ್ರೀಕೃಷ್ಣನು ಅನಂತ ಕಲ್ಯಾಣಗುಣನಿಲಯನಾದದ್ದರಿಂದ, ಆತನು ಗುಣದೃಷ್ಟಿಯಿಂದಲೂ ಸುಗುಣಿಯಾದ ಕುಂತಿಗಿಂತ ಶ್ರೇಷ್ಠತಮನಾಗಿರುವನು. ಇನ್ನು ಆತ್ಮದೃಷ್ಟಿಯಿಂದ ಶ್ರೀಕೃಷ್ಣ–ಕುಂತಿ ಇವರನ್ನು ಒರೆಹಚ್ಚಿ ನೋಡಿದರೆ, ಶ್ರೀಕೃಷ್ಣನು ಪರಮಾತ್ಮನು, ಕುಂತಿಯು ಜೀವಾತ್ಮಳು! ಅಂದಬಳಿಕ ಶ್ರೀಕೃಷ್ಣನು ಕುಂತಿಗಿಂತ ಆತ್ಮದೃಷ್ಟಿಯಿಂದಲೂ ಶ್ರೇಷ್ಠತಮನಾಗಿರುವನು. ಹೀಗೆ ಎಲ್ಲ ದೃಷ್ಟಿಗಳಿಂದಲೂ ಕುಂತಿಗಿಂತ ಶ್ರೇಷ್ಠನಾಗಿದ್ದ ಶ್ರೀಕೃಷ್ಣನು, ತನ್ನ ಸರ್ವತೋಮುಖ ಶ್ರೇಷ್ಠತ್ವದ ಅಹಂಕಾರಕ್ಕೆ ಒಳಗಾಗದೆ, ಹಿರಿಯರನ್ನು ನಮಸ್ಕರಿಸಬೇಕೆಂಬ ಧಾರ್ಮಿಕ ನಿಯಮವನ್ನು ಪಾಲಿಸುವದು ಧರ್ಮಪ್ರಭುವಾದ ತನ್ನ ಕರ್ತವ್ಯವೆಂದು ತಿಳಿದು ಕೇವಲ ಹಿರಿಯತನದ ಕ್ಷುದ್ರಕಾರಣಕ್ಕಾಗಿ ನಿಃಸ್ವಾರ್ಥಬುದ್ಧಿಯಿಂದ ಕುಂತಿಯನ್ನು ನಮಸ್ಕರಿಸಿದನು. ಒಟ್ಟಿಗೆ ಶ್ರೀಕೃಷ್ಣನು ಕುಂತಿಯ ವಿಷಯದಲ್ಲಿ ಸೌಜನ್ಯವ ತಾಳಿದ್ದು, ಕುಂತಿಯ ಭಯದಿಂದ, ಅಥವಾ ಕುಂತಿಯ ಒಲುಮೆ ಸಂಪಾದನೆಗಾಗಿ, ಅಥವಾ ಕುಂತಿಯಿಂದ ಏನಾದರೂ ಸಂಪಾದಿಸಬೇಕೆಂದು ಅರ್ಥಾತ್ ಕ್ಷುದ್ರ ಸ್ವಾರ್ಥಬುದ್ಧಿಯಿಂದಲ್ಲ, ಕೇವಲ ಧಾರ್ಮಿಕಕರ್ತವ್ಯ ಬುದ್ಧಿಯಿಂದ!

**ಧರ್ಮರಾಜ–ದುರ್ಯೋಧನರ ಸೌಜನ್ಯ ತಾರತಮ್ಯವು**— ಧಾರ್ಮಿಕತೆಯೇ ನಿಜವಾದ ಸೌಜನ್ಯವೆಂದು ಮೇಲೆ ಹೇಳಿದೆಯಷ್ಟೆ? ಧಾರ್ಮಿಕತೆಯು ಹೆಚ್ಚಿದಂತೆ ಸೌಜನ್ಯವು ಹೆಚ್ಚುತ್ತದೆಂಬದಕ್ಕೆ ಧರ್ಮರಾಜನೂ, ಧಾರ್ಮಿಕತೆಯು ಕೊರತೆಯಾದಂತೆ ಸೌಜನ್ಯವು ನಷ್ಟವಾಗುತ್ತದೆಂಬದಕ್ಕೆ

ದುರ್ಯೋಧನನೂ ಸಾಕ್ಷಿಯಾಗಿರುವರು. ಧರ್ಮರಾಜನು ಧರ್ಮಿಷ್ಠನಾದ್ದರಿಂದ, ತನ್ನ ಹಿತಕ್ಕೆ ಬಾಧೆತಂದ ಧೃತರಾಷ್ಟ್ರನನ್ನೂ ಕೂಡ ತನ್ನ ದೊಡ್ಡಪ್ಪನೆಂದು ಮನ್ನಿಸುತ್ತ ಆತನ ಅಪ್ಪಣೆಯನ್ನು ತಪ್ಪದೆ ಪಾಲಿಸುತ್ತ ಬಂದಿರುವನು; ಆದರೆ ಧರ್ಮಹೀನನಾದ ದುರ್ಯೋಧನನು, ತನ್ನ ತಂದೆಯಾದ ಧೃತರಾಷ್ಟ್ರನಮಾತನ್ನೂ ಲಕ್ಷಿಸದೆ, ತನ್ನ ನೀಚಸ್ವಾರ್ಥಕ್ಕೆ ಅಡ್ಡಬಂದಾಗ ಆತನನ್ನು ತಿರಸ್ಕರಿಸಿ ಆತನ ಅಪ್ಪಣೆಯನ್ನು ಮೀರಿರುವನು. ಅದರಂತೆ ಧರ್ಮನಿಷ್ಠನಾದ ಧರ್ಮರಾಜನು ವ್ಯಾಸ, ನಾರದ, ಭೀಷ್ಮಪ್ರಭೃತಿಮಹಾತ್ಮರ, ಹಾಗು ಗುರುಹಿರಿಯರ ಉಪದೇಶವನ್ನು ಅಕ್ಷರಶಃ ಪಾಲಿಸಿರುವನು; ಆದರೆ ಧರ್ಮಹೀನನಾದ ದುರ್ಯೋಧನನು, ಲೋಮಶ, ಕಣ್ವ, ಪರಶುರಾಮ, ವ್ಯಾಸ, ಭೀಷ್ಮ, ದ್ರೋಣನೊದಲಾದ ಮಹಾತ್ಮರ ಮಾತುಗಳನ್ನೂ, ತಾಯಿತಂದೆಗಳಾದ ಗಾಂಧಾರೀ-ಧೃತರಾಷ್ಟ್ರರ ಮಾತುಗಳನ್ನೂ ಮೀರಿರುವನು! ಇದನ್ನೆಲ್ಲ ವಿಚಾರಿಸಿ, ಧರ್ಮಿಷ್ಠಧರ್ಮರಾಜ, ಧರ್ಮಹೀನ ದುರ್ಯೋಧನ ಇವರ ಆಚರಣೆಯ ಪರಿಣಾಮವನ್ನು ಮನಸ್ಸಿನಲ್ಲಿ ತಂದರೆ, ಧರ್ಮಿಷ್ಠರು ಜಗತ್ತಿನಕ್ಷೇಮ-ಸುಖ-ಶಾಂತಿಗಳಿಗೂ, ಧರ್ಮಹೀನರು ಜಗತ್ತಿನ ನಾಶ-ದುಃಖ-ತಾಪಗಳಿಗೂ ಕಾರಣವಾಗುವರೆಂದು ಹೇಳಬೇಕಾಗುವದು.

**ಈಗಿನವರ ಸೌಜನ್ಯದಪಡಿಕಟ್ಟು**—ಭಾರತಕಾಲದಲ್ಲಿ, ಅಂದರೆ ಕಲಿಯುಗಾರಂಭದಲ್ಲಿ ಅಧರ್ಮದ ಹೆಚ್ಚಳದಿಂದ ಸೌಜನ್ಯದನಾಶವು ಎಷ್ಟರಮಟ್ಟಿಗೆ ಆಗಿತ್ತೆಂಬದು ದುರ್ಯೋಧನಾದಿ ಅಧರ್ಮಿಷ್ಠರ ಆಚರಣೆಯಿಂದ ಗೊತ್ತಾಗುವದು; ಆದರೆ ಆಗಿನಿಂದ ಈಗಿನಕಾಲದವರೆಗೆ ಐದುಸಾವಿರ ವರ್ಷಗಳು ಕ್ರಮಿಸಿಹೋಗಿರುವದರಿಂದ, ಕಲಿಯುಗದ ಸ್ವಭಾವದಂತೆ ಈಗಿನವರಲ್ಲಿ ಮತ್ತಿಷ್ಟು ಧರ್ಮಹ್ರಾಸವಾಗಿರುವದರಿಂದ, ರಾಷ್ಟ್ರದಸೌಜನ್ಯವು ಈಗ ಬಹುಮಟ್ಟಿಗೆಹಾಳಾಗಿರುವದು. ಈಗಿನ ಎಷ್ಟೋ ಅಹಂಮನ್ಯರು ಗುರುಹಿರಿಯರನ್ನು ಮನ್ನಿಸುವದಂತು ಇರಲಿ, ಜನ್ಮಕೊಟ್ಟ ತಂದೆಗೆ ತಂದೆಯೆನ್ನಲಿಕ್ಕೂ ಅವರ ಮಾನಕ್ಕೆ ಸಾಲುವದಿಲ್ಲ. ಈಗಿನವರ ಸೌಜನ್ಯವು ಕೇವಲ ಸ್ವಾರ್ಥದ್ದಾದ್ದರಿಂದ ಅದು ಮೋಸದ್ದೆಂದು ತಿಳಿಯಬೇಕು. ಈಗಿನ ಕಾಲದಲ್ಲಿ ದುಡ್ಡಿಗೆ, ಅಧಿಕಾರಕ್ಕೆ, ದುಷ್ಟತನಕ್ಕೆ ನಮಸ್ಕಾರವಿರುವದಲ್ಲದೆ, ಹಿರಿಯತನಕ್ಕೆ, ಸಜ್ಜನತೆಗೆ, ಗುರುತ್ವಕ್ಕೆ ನಮಸ್ಕಾರವಿರುವದಿಲ್ಲವು. ಈಗ ಸಾಧಾರಣವಾಗಿ ಪ್ರತಿಒಬ್ಬನಲ್ಲಿಯೂ ಅಹಂ

ಮಾನ್ಯತೆಯು ಹೆಚ್ಚಿರುವದರಿಂದ, ಯಾರದೇನು, ಯಾವನದೇನು ಎಂಬ ಸೊಕ್ಕಿನಿಂದ ಅವರು ತುಂಬಿಕೊಂಡಿರಲು, ಗುರುಹಿರಿಯರನ್ನೂ, ಮಾನ್ಯರನ್ನೂ ನಮಸ್ಕರಿಸಲಿಕ್ಕೂ, ಅವರನ್ನು ಮನ್ನಿಸಲಿಕ್ಕೂ, ಅವರ ಮಾತು ಕೇಳಲಿಕ್ಕೂ ಬೇಕಾಗುವ ಸೌಜನ್ಯಕ್ಕೆ ಅವರಲ್ಲಿ ಸ್ಥಳವೇ ಇರುವದಿಲ್ಲ. ಪ್ರತಿ ಒಬ್ಬನೂ ತಾನು ಅನ್ಯರಿಂದ ಮನ್ನಿಸಲ್ಪಡಬೇಕೆಂತಲೂ, ಅನ್ಯರನ್ನು ಮನ್ನಿಸುವದು ತನ್ನ ಗೌರವದಹಾನಿಗೆ ಕಾರಣವೆಂತಲೂ ತಿಳಿಯುವನು. ಅನ್ಯರ ನಮಸ್ಕಾರಕ್ಕೆ ಪ್ರತಿನಮಸ್ಕಾರಮಾಡುವದು ದೊಡ್ಡಸ್ತನದ ಕೊರತೆಯಾಗಿ ತೋರುವದರಿಂದ ಇವರು, ಅನ್ಯರ ನಮಸ್ಕಾರ ಗ್ರಹಿಸುವಲ್ಲಿ ಪ್ರತಿನಮಸ್ಕಾರಮಾಡಿ ಆದರವನ್ನು ತೋರಿಸದೆ, ಒಗರಿನಿಂದ ತಲೆಹಾಕಿ, ಇಲ್ಲವೆ ಕೈಯೆತ್ತಿದಂತೆಮಾಡಿ, ಎಟ್ಟತನದ ಸೊಕ್ಕನ್ನು ತೋರಿಸುವರು; ಮಾನ್ಯರು ಎದುರಿಗೆ ಬಂದರೆ ಮನಸ್ಸು ನಮಸ್ಕರಿಸಹೇಳಿದರೂ, ಇವರ ಒಸಟದೇಹವು ಮಣಿಯದ್ದರಿಂದ ಇವರು ನಗುತ್ತ ಯೋಗಕ್ಷೇಮವ ವಿಚಾರಿಸುವ ನೆವದಿಂದ ಅವರಿಂದ ಹೇಗಾದರೂಮಾಡಿ, ಮೊದಲು ನಮಸ್ಕಾರಮಾಡಿಸಿಕೊಂಡು ಧನ್ಯರಾಗಿ ಹಿಂದುಗಡೆ ನಮಸ್ಕಾರ ಮಾಡುವರು! ಹೀಗೆ ಈಗಿನವರ ಸೌಜನ್ಯದ ಚಾಳಿಗಳ ಪಡಿಕಟ್ಟು ತೋರಿಸಹತ್ತಿದರೆ, ಅದೊಂದು ಸ್ವತಂತ್ರ ವಿಷಯವೇ ಆದೀತು; ಆದರೆ ಈಗ ರಾಷ್ಟ್ರೀಯರಿಗೆ ಹೇಳುವ ಹಿತದಮಾತು ಇಷ್ಟೆ, ಇಂತಹ ಎಟ್ಟತನವು ಹೆಚ್ಚುವದು ಧರ್ಮಹೀನತೆಯ ಲಕ್ಷಣವಾಗಿರುವದರಿಂದ ಅದುಸರ್ವಥಾ ರಾಷ್ಟ್ರಕಲ್ಯಾಣಕಾರಿಯಲ್ಲವು. ಆದ್ದರಿಂದ ಪ್ರತಿಒಬ್ಬ ರಾಷ್ಟ್ರಹಿತೇಚ್ಛುವು ಚಿಕ್ಕಂದಿನಿಂದಲೇ ಸಂತತಿಗೆ ಧರ್ಮತಃ ನಮಸ್ಕಾರಾದಿಗಳನ್ನು ಮಾಡುವ ಚಟವನ್ನು ಹಚ್ಚಬೇಕು. ಹಿರಿಯರು-ಕಿರಿಯರು, ದೇವರು—ಧಾರ್ಮಿಕರು, ಮೊದಲಾದ ತಾರತಮ್ಯಭಾವವನ್ನು ಅವರ ಮನಸ್ಸಿನಲ್ಲಿ ಹುಟ್ಟಿಸಬೇಕು. ಅಂದರೆ ಮುಂದೆ ಅವರು ದೊಡ್ಡವರಾದಬಳಿಕ ಅಷ್ಟಮದಗಳಿಗೆ ಎಷ್ಟು ಎಡೆಯಾದರೂ, ಅವರ ಬಾಲಾಭ್ಯಾಸದ ಈಚಟವು ಪ್ರಸಂಗವಶಾತ್ ಉಪಯೋಗಿಸಿದರೆ ಉಪಯೋಗಿಸಿ, ಅವರ ಕಲ್ಯಾಣಕ್ಕೆ ಕಾರಣವಾದೀತು!

## ೨ ಧರ್ಮವು ನಿಜವಾದ ಅಭ್ಯುದಯಕ್ಕೆ ಬಾಧಕವಲ್ಲ, ಸಾಧಕವಾಗಿರುವದು.

**ಸಾಂಸಾರಿಕರ ಹಿತವ ಶ್ರುತಿ ಪ್ರಣೀತ ಕಟ್ಟಳೆಯು**—ಮೇಲಿನ ೧ನೇ ರಹಸ್ಯದಲ್ಲಿ ಧರ್ಮದ ಸ್ವರೂಪಾದಿಗಳನ್ನು ಅಚ್ಚುಕಟ್ಟಿನಲ್ಲಿ ವರ್ಣಿಸಿರುವದಷ್ಟೆ? ಆದರೆ ಧರ್ಮಶ್ರದ್ಧೆಯಿಲ್ಲದವರು ಧರ್ಮದ ಈ ಸ್ವರೂಪಾದಿಗಳ ವಿಚಾರಮಾಡದೆ, ಧರ್ಮವುಅಭ್ಯುದಯಕ್ಕೆ ಬಾಧಕವೆಂದು ಅದನ್ನು ಹೀಯಾಳಿಸುತ್ತ, ಯಾವಾಗಲೂ ಸಂಸಾರೋದಾಸೀನರಾಗಿ ಧರ್ಮನಿರತರಾಗಿರುವವರ ಸ್ಥಿತಿಯನ್ನು ತಮ್ಮ ಮಾತಿಗೆ ಉದಾಹರಣವಾಗಿ ಕೊಡುವರು; ಆದರೆ ಸಾಂಸಾರಿಕರು ಹೀಗೆ ಸಂಸಾರವವಿಷಯದಲ್ಲಿ ಉದಾಸೀನರಾಗಿ ಸದಾಧರ್ಮವನ್ನೇಆಚರಿಸುತ್ತಿರಬೇಕೆಂದು ಶ್ರುತಿಯು ಹೇಳುವದಿಲ್ಲ. ಈ ಸಂಬಂಧದಿಂದ ಸಭಾಪರ್ವದ ೯ ನೇಪುಟದಲ್ಲಿ ನಾರದರು, ರಾಜ್ಯರೂಪ ಮಹಾಕುಟುಂಬದ ಯಜಮಾನನಾದ ಧರ್ಮರಾಜನನ್ನುಕುರಿತು ಹೀಗೆ ಬೋಧಿಸಿರುವರು—“ಎಲೈ ನರಪುಂಗವಾ, ಯುಧಿಷ್ಠಿರಾ, ಧರ್ಮರಾಜಾ, ಅರಸರಲ್ಲಿ ನೀಚತ್ವ, ವೈರಾಗ್ಯ, ಕಾಮುಕತೆ ಇವು ಮಹಾದೋಷಗಳು; ಆದ್ದರಿಂದ ಧರ್ಮದಪ್ರೀತಿ, ಅರ್ಥದಲೋಭ, ಸುಖದ ಅಭಿಲಾಷೆ ಎಂಬ ಈ ಮೂರು ವಿಷಯಗಳು ರಾಜರಲ್ಲಿ ಮರ್ಯಾದಿತವಾಗಿರಬೇಕು. ಈ ನಿಯಮವನ್ನು ಪಾಲಿಸುವದಕ್ಕಾಗಿ ಶ್ರುತಿಯು ಹೀಗೆ ನಿಯಮವನ್ನು ಹಾಕಿಕೊಟ್ಟಿರುವದು.—“ಮನುಷ್ಯನು ಪೂರ್ವಾಹ್ನದಲ್ಲಿ ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡಬೇಕು. ಮಧ್ಯಾಹ್ನದಿಂದ ಸಾಯಾಹ್ನದವರೆಗೆ ದ್ರವ್ಯಾರ್ಜನಾದಿ ಅರ್ಥಪರಕೃತ್ಯಗಳನ್ನು ಮಾಡಬೇಕು. ಸಾಯಾಹ್ನದಲ್ಲಿ ಹಾಗು ಅದರ ಅನಂತರ ಸುಖವನ್ನು ಭೋಗಿಸಬೇಕು”

**ನೀಚತ್ವವೆಂದರೇನು?**—ಮೇಲೆ ನಾರದರು ಧರ್ಮರಾಜನಿಗೆ, ಅರಸರಲ್ಲಿ ನೀಚತ್ವವಿರಬಾರದೆಂದು ಮೊದಲಿಗೇ ಹೇಳಿರುವರಷ್ಟೆ? ಆದ್ದರಿಂದ ನೀಚತ್ವವೆಂದರೇನೆಂಬದನ್ನು ಇಲ್ಲಿ ಸ್ವಲ್ಪದರಲ್ಲಿ ವಿವರಿಸಿಹೇಳುವೆವು. ಈ ಜಗತ್ತು ಜಡಕೋಟಿ, ಜೀವಕೋಟಿಗಳೆಂಬ ಎರಡುಕೊಟಿಗಳಿಂದ ತುಂಬಿದ್ದಾಗಿರುವದು. ಪೃಥಿವಿ, ಅಪ್, ತೇಜ, ವಾಯು, ಆಕಾಶಗಳೆಂಬ ಅಜಾಗ್ರತ

ಚೇತನಾಯುಕ್ತ ಪಂಚಮಹಾಭೂತಗಳು ಜಡಕೋಟಿಗಳು; ವೃಕ್ಷಾದಿಮನುಷ್ಯಾಂತವಾದ ಜಾಗ್ರತಚೇತನಾಯುಕ್ತ ಪ್ರಾಣಿಜಾತಗಳು ಚೇತನಾಕೋಟಿಗಳು. ಈ ಚೇತನಾಕೋಟಿಯಲ್ಲಿ ದೇವ, ಮನುಷ್ಯ, ತಿರ್ಯಕ್ (ನೀಚ) ಎಂಬ ಮೂರು ಬಗೆಯ ಜೀವಜಾತಗಳು ಬರುವವು. ಈ ತ್ರಿವಿಧ ಜೀವಜಾತಗಳಲ್ಲಿ ದೇವತೆಗಳು ಪುಣ್ಯಪುಂಜರಾಗಿ ಕರ್ಮವೇನೂ ಮಾಡದೆ ಸತ್ವಗುಣಪ್ರಧಾನರೂ, ಪುಣ್ಯತೀರುವವರೆಗೆ ಕೇವಲ ಸುಖಭೋಗಿಸುವವರೂ ಆಗಿ, ಉಚ್ಚಕೋಟಿಯ ಜೀವರೆನಿಸಿಕೊಳ್ಳುವರು; ಮನುಷ್ಯರು ಪಾಪಪುಣ್ಯ ಮಿಶ್ರರಾಗಿ ಪಾಪ–ಪುಣ್ಯಸಂಪಾದನದ ಕರ್ಮಗಳನ್ನು ಮಾಡುತ್ತ, ಪ್ರಾಮುಖ್ಯವಾಗಿ ರಜೋಗುಣಪ್ರಧಾನರೂ, ಪ್ರಾರಬ್ಧದಂತೆ ಸುಖದುಃಖಗಳನ್ನು ಭೋಗಿಸುವವರೂ ಆಗಿ, ಮಧ್ಯಮಕೋಟಿಯ ಜೀವರೆನಿಸಿಕೊಳ್ಳುವರು. ತಿರ್ಯಕ್, ಅಂದರೆ ಕ್ರಿಮಿ–ಕೀಟ, ಪಶು–ಪಕ್ಷ್ಯಾದಿಗಳು ಪಾಪಾಧಿಕಗಳಾಗಿ ಕರ್ಮವೇನೂಮಾಡದೆ ತಮೋಗುಣಪ್ರಧಾನಗಳೂ, ಪ್ರಾಮುಖ್ಯವಾಗಿ ದುಃಖಭೋಗಿಗಳೂ ಆಗಿ ನೀಚಕೋಟಿಯ ಜೀವಗಳೆನಿಸುವವು.

ಮೇಲೆ ಹೇಳಿದ—ಉಚ್ಚ—ಮಧ್ಯಮ—ನೀಚಕೋಟಿಗಳ ಜೀವಜಾತಗಳ ಲಕ್ಷಣಗಳನ್ನು ಮನಸ್ಸಿನಲ್ಲಿ ತಂದು ವಿಚಾರಿಸಿದರೆ, ದೇವತೆಗಳಿಗೂ, ತಿರ್ಯಕ್ (ನೀಚ) ವರ್ಗದ ಪ್ರಾಣಿಗಳಿಗೂ ಕರ್ಮಾಧಿಕಾರವಿರದೆ, ಕ್ರಮವಾಗಿ ಕೇವಲ ಸುಖ–ದುಃಖಗಳನ್ನಷ್ಟೇ ಭೋಗಿಸುವ ಅಧಿಕಾರವಿರುವದರಿಂದ ಈ ಉತ್ತಮ–ನೀಚಯೋನಿಗಳಿಗೆ ಭೋಗ್ಯಯೋನಿಗಳೆನ್ನುವರು; ಆದರೆ ಮಧ್ಯಮ ಕೋಟಿಯ ಜೀವರಾದ ಮನುಷ್ಯರಿಗೆ ಪಾಪ–ಪುಣ್ಯಸಂಪಾದನದ ಹೊಸ ಕರ್ಮಮಾಡುವ ಅಧಿಕಾರವಿರುವದರಿಂದ, ಮನುಷ್ಯರು ಕರ್ತವ್ಯಯೋನಿಯವರೆನಿಸುವರು. ಹೀಗೆ ಮನುಷ್ಯಯೋನಿಯು ಕರ್ತವ್ಯಯೋನಿಯಾದ್ದರಿಂದ ಮನುಷ್ಯನು ಪುಣ್ಯವನ್ನು ಅಧಿಕವಾಗಿ ಸಂಪಾದಿಸಿ, ಜನ್ಮಾಂತರದಲ್ಲಿ ಸುಖಭೋಗದ ದೇವತೆಗಳ ಜನ್ಮಮನ್ನೂ, ಪಾಪವನ್ನು ಅಧಿಕವಾಗಿ ಸಂಪಾದಿಸಿ ನರಕಯಾತನೆಯ–ತಿರ್ಯಗ್ ಯೋನಿಗಳನ್ನೂ, ಪಾಪಪುಣ್ಯಗಳೆರಡನ್ನೂ ಸಮನಾಗಿ ಸಂಪಾದಿಸಿ ಪುನಃ ಮನುಷ್ಯಯೋನಿಯನ್ನೂ, ಪಾಪಪುಣ್ಯಗಳೆರಡರ ಇಚ್ಛೆಯಿಲ್ಲದೆ, ಈಶ್ವರಾರ್ಪಣ ಬುದ್ಧಿಯಿಂದ ನಿಷ್ಕಾಮಕರ್ಮಮಾಡಿ ಮೋಕ್ಷವನ್ನೂ ಸಂಪಾದಿಸಬಹುದು. ಒಟ್ಟಿಗೆ ಮನುಷ್ಯಜನ್ಮವು

ಅಡಿಗೆಯ ಮನೆಯಿದ್ದ ಹಾಗೆ. ಅಡಿಗೆಯ ಮನೆಯಲ್ಲಿ ಮಾಡಿದ ಅಡಿಗೆಯನ್ನೇ ಅಡಿಗೆ ಮಾಡಿದವನು ಉಣ್ಣುವಂತೆ, ಮನುಷ್ಯನು ತನ್ನ ಕರ್ಮಸ್ವರೂಪವಿದ್ದಂತೆ ಮೇಲೆ ಹೇಳಿದ ಪ್ರಕಾರ ಸ್ವರ್ಗವನ್ನಾಗಲಿ, ನರಕಯಾತನಾಯೋನಿ-ತಿರ್ಯಗ್ ಯೋನಿಗಳನ್ನಾಗಲಿ, ಪುನಃ ಮನುಷ್ಯಜನ್ಮವನ್ನಾಗಲಿ, ಮೋಕ್ಷವನ್ನಾಗಲಿ ಸಂಪಾದಿಸುವನು. ಇಂತಹ ಸ್ವಾತಂತ್ರ್ಯವೂ, ಅಲಭ್ಯ ಅಧಿಕಾರವೂ ಮನುಷ್ಯನಿಗಿರುವದರಿಂದ, ದೇವತೆಗಳುಕೂಡ ಮನುಷ್ಯಯೋನಿಯನ್ನು ಇಚ್ಛಿಸುವರು. ಇಂತಹ ಘನವಾದ ಯೋಗ್ಯತೆಯ ಮನುಷ್ಯನು ಧರ್ಮಾಧರ್ಮವಿಚಾರವಿಲ್ಲದೆ ಪಶುವಿಂತೆ ಸ್ವೇಚ್ಛಾಚಾರಿಯಾಗಿ ಜನ್ಮಾಂತರಗಳಲ್ಲಿ ಪಶ್ವಾದಿ ತಿರ್ಯಗ್ ಯೋನಿಗಳನ್ನು ಪಡೆಯುವದು ಭೂಷಣವೂ,ಕಲ್ಯಾಣಕರವೂಅಲ್ಲವು.

ಮೇಲಿನ ವಿವೇಚನದಿಂದ ಧರ್ಮಾಧರ್ಮ ವಿಚಾರದಸಂಬಂಧವಿಟ್ಟು, ಅಥವಾ ಆ ಸಂಬಂಧವನ್ನು ಬಿಟ್ಟು ಕರ್ಮ ಮಾಡುವ ಅಧಿಕಾರವು ಮನುಷ್ಯನಿಗೆ ಮಾತ್ರ ಇದ್ದು, ಉಚ್ಚವಾದ ದೇವಯೋನಿಗೆ, ಅಥವಾ ನೀಚವಾದ ತಿರ್ಯಗ್‌ಯೋನಿಗೆ ಆ ಅಧಿಕಾರವಿಲ್ಲೆಂದು ಹೇಳಿದಹಾಗಾಯಿತು. ದೇವತೆಗಳಿಗೆ ಧರ್ಮಾಧರ್ಮ ವಿಚಾರವಿದ್ದರೂ ಪಾಪಪುಣ್ಯಸಂಪಾದನದ ಹೊಸ ಕರ್ಮಮಾಡುವ ಅಧಿಕಾರವು ಅವರಿಗಿರುವದಿಲ್ಲ; ಆದರೆ ತಿರ್ಯಗ್ ಅಂದರೆ ನೀಚಯೋನಿಯ ಪ್ರಾಣಿಗಳಿಗೆ ಧರ್ಮಾಧರ್ಮ ವಿಚಾರವೂ ಇರುವದಿಲ್ಲ, ಪಾಪಪುಣ್ಯಸಂಪಾದನವ ಕರ್ಮಮಾಡುವ ಅಧಿಕಾರವೂ ಇರುವದಿಲ್ಲ; ಆದ್ದರಿಂದ ಈ ತಿರ್ಯಗ್‌ಯೋನಿಯು ನೀಚಯೋನಿಯೆನಿಸುವದು. ಈ ನೀಚಯೋನಿಯ ನೀಚತಮಭಾವಕ್ಕೆ ನೀಚತ್ವವೆನ್ನುವರು. ಧರ್ಮಾಧರ್ಮ ವಿವೇಕವುಳ್ಳ ಮನುಷ್ಯನ ಭಾವಕ್ಕೆ ಮನುಷ್ಯತ್ವವೆನ್ನುತ್ತಿದ್ದರೂ, ಮನುಷ್ಯನು ಧರ್ಮಾಧರ್ಮ ವಿಚಾರವಿಲ್ಲದೆ ಪಶುವಿನಂತೆ ಮನಸ್ಸಿಗೆ ಬಂದಹಾಗೆ ನಡೆದರೆ, ಅವನ ಆ ಮನಸ್ಥಿತಿಗೆ ಅಂದರೆ ಧರ್ಮಹೀನತೆಗೆ ನೀಚತ್ವವೆಂತಲೇ ಅನ್ನುವರು. ಮನುಷ್ಯನು ನೀಚತ್ವವುಳ್ಳವನಾದರೆ ಜನ್ಮಾಂತರದಲ್ಲಿ ಅವನಿಗೆ ತಿರಿಯಗ್, ಅಂದರೆ ನೀಚಯೋನಿಯು ಪ್ರಾಪ್ತವಾಗುವದರಿಂದ, ನಾರದರು ಧರ್ಮರಾಜನಿಗೆ ಸಂಸಾರಿಮನುಷ್ಯನಲ್ಲಿನೀಚತ್ವವು ಇರಲಾಗದೆಂದು ಹೇಳಿರುವರು.

**ವೈರಾಗ್ಯ**—ವೈರಾಗ್ಯವೆಂದರೆ ವಿಷಯನಿರಿಚ್ಛೆಯು; ಅಂದರೆ ಸೃಷ್ಟಿ

ಯಲ್ಲಿಯ ವಿವಿಧಸುಖಗಳನ್ನು ಇಚ್ಛಿಸದಿರುವದು. ಇಂಥ ಕೇವಲ ವೈರಾಗ್ಯವು ಅರಸರಲ್ಲಿ ಇರಬಾರದೆಂದು ನಾರದರು ಧರ್ಮರಾಜನಿಗೆ ಹೇಳಿರುವರು. ಮನುಷ್ಯರಲ್ಲಿ ಸಂಸಾರಿಗಳು, ಮುಮುಕ್ಷುಗಳು, ಮುಕ್ತರು ಎಂಬ ಮೂರು ಬಗೆಯ ಜನರಿರುವರು. ಮೇಲೆ ಹೇಳಿದಂತೆ ಧರ್ಮಾಧರ್ಮವಿಚಾರದ ಸಂಬಂಧವಿಟ್ಟು, ಅಥವಾ ಆ ಸಂಬಂಧವನ್ನು ಬಿಟ್ಟು ಕರ್ಮಮಾಡಿ, ಆ ಕರ್ಮಫಲದ ಸುಖದುಃಖರೂಪವಾದ ಕತ್ತರಿಯ ಇರುಕಿನಲ್ಲಿ ಸಿಕ್ಕು ನಗುತ್ತ ಅಳುತ್ತ ಸಾಗಿರುವವರು ಸಂಸಾರಿಗಳು. ಈಸುಖದುಃಖಗಳ ಇರುಕಿನ ಕಷ್ಟದಿಂದ ಹೇಗೆ ಮುಕ್ತರಾದೇವೆಂದು ಚಿಂತಿಸಿ ಮೋಕ್ಷವನ್ನು ಇಚ್ಛಿಸಿ ಅದಕ್ಕಾಗಿ ಹೆಣಗುವವರು ಮುಮುಕ್ಷುಗಳು. ಅಂತಹ ಮುಮುಕ್ಷುಗಳು ಸದ್ಗುರುವನ್ನು ಸಂಪಾದಿಸಿ, ಆತನ ಸೇವೆಯಿಂದ ಅನುಗ್ರಹಪಡೆದು ಸುಖದುಃಖಗಳ ಕತ್ತರಿಯ ಇರುಕಿನ ಕಷ್ಟದಿಂದ ಮುಕ್ತರಾಗಿ ಅಖಂಡಾನಂದವನ್ನು ಪಡೆದವರು ಮುಕ್ತಜೀವರು. ಹೀಗೆ ಮನುಷ್ಯರಲ್ಲಿ ಬದ್ಧರು, ಮುಮುಕ್ಷುಗಳು, ಮುಕ್ತರು ಇರುವಂತೆ ದೇವಯೋನಿ ತಿರ್ಯಗ್ಯೋನಿಗಳ ಜೀವರಲ್ಲಿ ಮುಮುಕ್ಷುಗಳು ಮುಕ್ತರು ಇರುವದಿಲ್ಲ, ಅವರು ಬದ್ಧರು ಮಾತ್ರ ಇರುವರು. ಯಾಕಂದರೆ ಇವೆರಡುಯೋನಿಗಳು ಕರ್ತವ್ಯಯೋನಿಗಳಾಗಿರದೆ ಭೋಗ್ಯಯೋನಿಗಳಾಗಿರುವವೆಂದು ಹಿಂದೆ ಹೇಳಿದೆ. ಮನುಷ್ಯರಲ್ಲಿಯ ಬದ್ಧಜೀವರಿಗೆ, ಅಂದರೆ ಸಾಂಸಾರಿಕಜೀವರಿಗೆ ಕೇವಲ ವೈರಾಗ್ಯವಿರದೆ, ಧರ್ಮಕ್ಕೆ ವಿರುದ್ಧವಾದ ವಿಷಯಗಳಲ್ಲಿ ಮಾತ್ರ ವೈರಾಗ್ಯವಿರಬೇಕು; ಧರ್ಮಕ್ಕೆ ವಿರುದ್ಧವಲ್ಲದ ವಿಷಯಸೇವನಕ್ಕಾಗಿ ಅವರು ಧನಾದಿಗಳನ್ನು ಸಂಪಾದಿಸತಕ್ಕದ್ದು; ಯಾಕಂದರೆ ಕೇವಲ ವಿರಾಗಿಯು ಸೃಷ್ಟಿಯಲ್ಲಿ ತಾನು ಬಾಳುವದೇ ಅಶಕ್ಯವಾಗಿರಲು, ತನ್ನ ಕುಟುಂಬ ಪೋಷಣವನ್ನು ಮಾಡಲಾರನು. ಮುಮುಕ್ಷು—ಮುಕ್ತಜೀವರು ಹೆಚ್ಚು ಹೆಚ್ಚು ವೈರಾಗ್ಯತಾಳುತ್ತಾ ಹೋಗಿ, ಮುಕ್ತರಂತು ವಿಷಯವಾಸನೆಯನ್ನು ಸಂಪೂರ್ಣವಾಗಿ ತ್ಯಜಿಸಬೇಕಾಗುವದು.

ಹೀಗೆ ವೈರಾಗ್ಯವು ಉತ್ತರೋತ್ತರ ಹೆಚ್ಚುತ್ತಹೋಗಲು ಅನುಕೂಲವಾಗಬೇಕೆಂತಲೂ, ಸೃಷ್ಟಿಯ ವ್ಯವಹಾರವೂ ಅವ್ಯಾಹತವಾಗಿ ಸಾಗಬೇಕೆಂತಲೂ ಶ್ರುತಿಮಾತೆಯು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳನ್ನು ವಿಧಿಸಿರುವಳು. ಈ ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣವ

ರ್ಣವು ಸತ್ವಗುಣಪ್ರಧಾನವಾದದ್ದರಿಂದ ಜಗತ್ತಿಗೆ ಜ್ಞಾನದಾನಮಾಡುತ್ತ ವೈರಾಗ್ಯೋನ್ಮುಖವಾಗಿ ಜೀವಿಸಬೇಕಾಗುವದು. ಕ್ಷತ್ರಿಯ ವೈಶ್ಯವರ್ಣಗಳು ರಜೋಗುಣಪ್ರಧಾನಗಳಾಗಿ ಕ್ರಮವಾಗಿ ಜಗತ್ತಿನ ರಕ್ಷಣ-ಪರಿಪೋಷಣಗಳನ್ನು ಮಾಡುತ್ತ, ಧಾರ್ಮಿಕಸುಖೋಪಭೋಗೋನ್ಮುಖವಾಗಿ ನಡೆದುಕೊಳ್ಳಬೇಕಾಗುವದು. ಶೂದ್ರವರ್ಣವು ತಮೋಗುಣಪ್ರಧಾನವಾದದ್ದರಿಂದ, ಮೇಲಿನ ತ್ರೈವರ್ಣಿಕರಿಗೆ ಸೇವಾರೂಪದಿಂದ ಅನುಕೂಲ್ಯವನ್ನು ಒದಗಿಸಿಕೊಡುತ್ತ, ಪರಿಮಿತ ಸುಖವನ್ನು ಭೋಗಿಸುತ್ತ ತ್ರೈವರ್ಣಿಕರಿಗೆ ಅಧೀನವಾಗಿ ನಡಕೊಳ್ಳಬೇಕಾಗುವದು. ಆಪತ್ಕಾಲದಲ್ಲಿ ಈ ನಾಲ್ಕು ವರ್ಣಗಳಲ್ಲಿಯ ಶ್ರೇಷ್ಠವರ್ಣದವರು ತಮ್ಮ ಕೆಳಗಿನ ವರ್ಣಗಳ ಕರ್ಮಗಳನ್ನು ಮಾಡಿದರೆ, ಅವರು ಜಾತಿಯಿಂದಲ್ಲ, ವೃತ್ತಿಯಿಂದ ಕೆಳಗಿನ ವರ್ಣದವರಾಗುವರು. ಉದಾಹರಣಾರ್ಥ—ದ್ರೋಣಾಚಾರ್ಯರು ಜಾತಿಯಿಂದ ಬ್ರಾಹ್ಮಣರಾದರೂ ಕ್ಷಾತ್ರಕರ್ಮಕುಶಲರಾದದ್ದರಿಂದ ವೃತ್ತಿಯಿಂದ ಕ್ಷತ್ರಿಯರೆನಿಸಿಕೊಳ್ಳುವರು. ಇಂಥವರು ವ್ಯವಹಾರತಃ ತಮ್ಮ ಮೂಲವರ್ಣದ ಧರ್ಮಗಳನ್ನೂ, ಕರ್ಮತಃ ಆ ಅನ್ಯವರ್ಣದ ಧರ್ಮಗಳನ್ನೂ ಪ್ರಾಮುಖ್ಯವಾಗಿ ಪಾಲಿಸಬೇಕಾಗುವದು. ಹೇಗಿದ್ದರೂ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರ ವರ್ಣಗಳಲ್ಲಿ ವೈರಾಗ್ಯವು ಉತ್ತರೊತ್ತರ ಕಡಿಮೆಯಾಗುತ್ತಾ ಹೋದರೂ, ಸಾಂಸಾರಿಕರು ಯಾವವರ್ಣದವರಿದ್ದರೂ ಪೂರ್ಣ ವಿರಾಗಿಗಳಾಗದೆ, ವಿರಾಗ-ರಾಗಮಿಶ್ರರಾಗಿ ನಡಕೊಳ್ಳಬೇಕಾಗುವದು. ಅಂದರೆ ಬ್ರಾಹ್ಮಣರಲ್ಲಿ ವಿರಾಗವು ಹೆಚ್ಚು; ರಾಗವು ಕಡಿಮೆ. ಕ್ಷತ್ರಿಯ-ವೈಶ್ಯರಲ್ಲಿ ಸಾಧಾರಣವಾಗಿ ಬ್ರಾಹ್ಮಣರಿಗಿಂತ ವಿರಾಗವು ಕಡಿಮೆ; ಬ್ರಾಹ್ಮಣರಿಗಿಂತ ರಾಗವು ಹೆಚ್ಚು. ಶೂದ್ರರಲ್ಲಿ ವಿರಾಗ-ರಾಗಗಳೆರಡೂ ತಮಗೆ ಸೇವ್ಯರಾದ ತ್ರೈವರ್ಣಿಕರ ರಾಗ-ವಿರಾಗಗಳ ಮಾನವಿದ್ದಂತೆ, ಅವನ್ನು ಅನುಸರಿಸಿ ಇರಬೇಕಾಗುವದು. ಒಟ್ಟಿಗೆ ಸಾಂಸಾರಿಕಜೀವರು ತಮ್ಮ ತಮ್ಮ ವರ್ಣಾಶ್ರಮ ಧರ್ಮಕ್ಕನುಸರಿಸಿ ಧನವನ್ನು ಸಂಪಾದಿಸಿ, ಧರ್ಮದಂತೆ ವಿಷಯಗಳನ್ನು ಭೋಗಿಸಬೇಕಾಗುವದಲ್ಲದೆ ಕೇವಲ ವಿರಾಗಿಗಳಾಗಬಾರದು.

**ಕಾಮುಕತೆ**—ಕಾಮುಕತೆಯೆಂದರೆ ಸ್ತ್ರೀಸಂಭೋಗೇಚ್ಛೆಯ ಅತಿರೇಕವು. ಯಾವತ್ತು ಪ್ರಾಣಿಗಳಿಗೆ ಆಹಾರಗ್ರಹಣದಲ್ಲಿ ಸಹಜಪ್ರವೃತ್ತಿಯಾಗು

ವಂತೆ, ಸ್ತ್ರೀಸಂಭೋಗದಲ್ಲಿಯೂ ಸಹಜಪ್ರವೃತ್ತಿಯಾಗುವದು ಸೃಷ್ಟಿಯ ನಿಯಮವಾಗಿರುತ್ತದೆ. ಆಹಾರಗ್ರಹಣ ಮಾಡದಿದ್ದರೆ ಪ್ರಾಣಿಗಳ ನಾಶವಾಗುವಂತೆ, ಸ್ತ್ರೀಸಂಭೋಗಮಾಡದಿದ್ದರೆ ಸಂತತಿಯ ಪರಂಪರೆಯು ನಿಂತು ಹೋಗಿ, ಕಾಲಾಂತರದಿಂದ ಸೃಷ್ಟಿಯ ನಾಶವಾಗಬಹುದು; ಆದರೆ ದೇವರ ಸಂಕೇತವು, ತನಗೆ ಬೇಕಾಗಿರುವವರೆಗೆ ಸೃಷ್ಟಿಯ ನಾಶವಾಗದೆ ಸೃಷ್ಟಿಯ ಪರಂಪರೆಯು ನಡೆಯಬೇಕೆಂದು ಇರುವದರಿಂದ, ಈಶ್ವರೀತಂತ್ರದಂತೆ ಸ್ತ್ರೀ ಸಂಭೋಗೇಚ್ಛೆಯು ಪ್ರಾಣಿಗಳಿಗೆ ಅತ್ಯಂತ ಪ್ರಿಯವೂ, ಅಪರಿಹಾರ್ಯವೂ ಆಗಿರುತ್ತದೆ; ಆದರೂ ಪ್ರಾಣಿಗಳು ಧರ್ಮಕ್ಕನುಸರಿಸಿ, ಅಂದರೆ ಋತುಕಾಲ ದಲ್ಲಿ ಮಾತ್ರ ಸ್ತ್ರೀಸಂಭೋ-ಗಮಾಡುವದು ಮನುಷ್ಯೇತರ ಪ್ರಾಣಿಗಳಲ್ಲಿ ವಾಡಿಕೆಯಾಗಿರುವಂತೆ ಮನುಷ್ಯರಾದರೂ ಮಾಡತಕ್ಕದ್ದು. ಈ ಸ್ತ್ರೀಸಂಭೋಗೇಚ್ಛೆಯನ್ನು ಬ್ರಹ್ಮಚಾರಿಗಳೂ, ಮುಮುಕ್ಷುಗಳೂ, ಸನ್ಯಾಸಿಗಳೂ ಪ್ರಯತ್ನಪೂರ್ವಕ ತ್ಯಜಿಸಬೇಕಾದರೂ, ಸಂಸಾರಿಜೀವರು ಅದರಅತಿರೇಕಮಾಡಿ ದುರ್ಬಲರಾಗದೆಧರ್ಮಕ್ಕನುಸರಿಸಿ ಸ್ತ್ರೀಸಂಭೋಗವನ್ನು ಮಾಡತಕ್ಕದ್ದು.

ಮೇಲೆ ಹೇಳಿದಂತೆ ಮೋಕ್ಷಸಾಧನವಾದ ವೈರಾಗ್ಯವು ಶೂದ್ರವರ್ಣದಿಂದ ಪ್ರಾಮುಖ್ಯವಾಗಿ ಉತ್ತರೋತ್ತರ ಹೆಚ್ಚುತ್ತಹೋಗಲಿಕ್ಕೆ ಅನುಕೂಲವಾಗಬೇಕೆಂತಲೂ, ಸೃಷ್ಟಿಯ ವ್ಯವಹಾರವೂ ಅವ್ಯಾಹತವಾಗಿ ಸಾಗಬೇಕೆಂತಲೂ ಶ್ರುತಿಮಾತೆಯು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕುವರ್ಣಗಳನ್ನು ವಿಧಿಸಿರುವಂತೆ, ಪ್ರಾಮುಖ್ಯವಾಗಿಸ್ತ್ರೀಸಂಭೋಗದ ನಿಯಮನದ ದೃಷ್ಟಿಯಿಂದ ಅದೇ ಶ್ರುತಿಮಾತೆಯು ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ ಎಂಬನಾಲ್ಕು ಆಶ್ರಮಗಳನ್ನು ವಿಧಿಸಿರುವಳು. ಇವುಗಳಲ್ಲಿ ಬ್ರಹ್ಮಚರ್ಯವು ಧರ್ಮಾರ್ಥ-ಕಾಮ-ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳ ಸಂಪಾದನದ ಅಧಿಕಾರವನ್ನು ಗುರುಕುಲವಾಸದ ತಪಶ್ಚರ್ಯದಿಂದ ಸಂಪಾದಿಸತಕ್ಕ ಆಶ್ರಮವಾದದ್ದರಿಂದ, ಬ್ರಹ್ಮಚಾರಿಯು ತನ್ನ ಆಶ್ರಮಧರ್ಮ, ಗುರುಸೇವೆ ಇವೆರಡರ ಹೊರತು ಇತರ ಕರ್ಮಗಳನ್ನು, ಅಂದರೆ ದ್ರವ್ಯಸಂಪಾದನ–ಸ್ತ್ರೀಭೋಗಗಳನ್ನು ಮಾಡಲಾಗದು. ಅದರಂತೆ ವಾನಪ್ರಸ್ಥಾಶ್ರಮವು ಮುಮುಕ್ಷುಗಳಿಗೆ, ಅಂದರೆ ಮೋಕ್ಷಾಪೇಕ್ಷಿಗಳಿಗೆ ಸಂಬಧಿಸಿದ್ದಾದ್ದರಿಂದ, ಆ ವಾನಪ್ರಸ್ಥರು ವೈರಾಗ್ಯ

ಪ್ರಾಪ್ತಿಗಾಗಿ ಅರ್ಥಸಂಪಾದನ-ಸ್ತ್ರೀಸಂಭೋಗಗಳ ನಿಯಮನವನ್ನು ದಕ್ಷತೆಯಿಂದ ಮಾಡಬೇಕಾಗುವದು. ಸನ್ಯಾಸಾಶ್ರಮದಿಂದ ಮೋಕ್ಷವನ್ನು ಸಂಪಾದಿಸಬೇಕಾಗಿರುವದರಿಂದ, ಸನ್ಯಾಸಿಗಳು ಧನಸಂಪಾದನ-ಸ್ತ್ರೀಸಂಭೋಗಗಳನ್ನು ಪರಿತ್ಯಜಿಸಬೇಕಾಗುದು. ಅಂದಬಳಿಕ, ಸೃಷ್ಟಿಯ ಅಸ್ತಿತ್ವಕ್ಕೂ, ಅದರ ಉತ್ಕರ್ಷಾಪಕರ್ಷಗಳಿಗೂ ಕಾರಣವಾದ ಸ್ತ್ರೀಸಂಭೋಗವನ್ನು ಧರ್ಮಕ್ಕನುಸರಿಸಿ, ಅಂದರೆ ಸ್ತ್ರೀಋತುಕಾಲದಲ್ಲಿ ಮಾತ್ರ ಗೃಹಸ್ಥಾಶ್ರಮಿಗಳು ಮಾಡಬೇಕಾಗುವದು. ಈ ಜಗತ್ತಿನಲ್ಲಿ ಮುಮುಕ್ಷುಗಳ ಹಾಗು ಮುಕ್ತರ ಸಂಖ್ಯೆಯು ಅತ್ಯಲ್ಪವಾಗಿದ್ದು, ಸಾಂಸಾರಿಕರಿಂದಲೇ ಜಗತ್ತು ತುಂಬಿರುವದರಿಂದ, ಸೃಷ್ಟಿಯಪರಂಪರೆಯು ಉತ್ಕರ್ಷಹೊಂದುತ್ತಾಗಲಿ, ಅಪಕರ್ಷಹೊಂದುತ್ತಾಗಲಿ ಅವ್ಯಾಹತವಾಗಿ ಸಾಗುತ್ತಬಂದಿರುವದು; ಅದಕ್ಕಾಗಿಯೇ ನಾರದರು ಧರ್ಮರಾಜನಿಗೆ, ರಾಜರು ಯಾವಾಗಲೂ ಸ್ತ್ರೀಸಂಭೋಗಾಸಕ್ತರು, ಅಂದರೆ ಕಾಮುಕರು ಆಗದೆ, ಋತುಕಾಲದಲ್ಲಿ, ಅಂದರೆ ನಿಯಮಿತವಾಗಿ ಸ್ತ್ರೀಸಂಭೇಗವನ್ನು ಮಾಡಬೇಕೆಂದು ಹೇಳಿರುವರು.

**ನೀಚತ್ವ-ವೈರಾಗ್ಯ-ಕಾಮುಕತೆಗಳ ಅಪಾಯನಿವಾರಣಕ್ಕೆ ಧರ್ಮವೇ ಔಷಧವು**—ಅಧಾರ್ಮಿಕತೆಗೆ ನೀಚತ್ವವೆಂತಲೂ, ವಿಷಯನಿರಿಚ್ಛೆಗೆ ವೈರಾಗ್ಯವೆಂತಲೂ, ಸ್ತ್ರೀಭೋಗಾಸಕ್ತಿಗೆಕಾಮುಕತೆಯೆಂತಲೂ ಅನ್ನಬೇಕೆಂದು ಮೇಲೆ ಹೇಳಿರುತ್ತದೆ; ಮತ್ತು ನೀಚತ್ವದಿಂದ ಅಂದರೆ ಅಧಾರ್ಮಿಕತೆಯಿಂದ ಮನುಷ್ಯನಿಗೆ ಪಶುತ್ವಪ್ರಾಪ್ತಿವಾಗುವದೆಂತಲೂ, ಕೇವಲವಿರಾಗಿಯು ಈ ಸೃಷ್ಟಿಯಲ್ಲಿ ಜೀವಿಸದೆ ಆತ್ಮಘಾತಕಿಯಾಗುವನೆಂತಲೂ, ಸ್ತ್ರೀಭೋಗಾಸಕ್ತನು ದುರ್ಬಲನಾಗುವನೆಂತಲೂ ಮೇಲೆಯೇ ಹೇಳಿರುತ್ತದೆ. ಹೀಗೆ ಪಶುತ್ವಪ್ರಾಪ್ತಿ, ಆತ್ಮಘಾತ, ಬಲಹೀನತೆಗಳೆಂಬ ಅನರ್ಥಕಾರಕಸಂಗತಿಗಳು ರಾಷ್ಟ್ರನಾಶಕ್ಕೆ ಕಾರಣಗಳಾದದ್ದರಿಂದ, ರಾಷ್ಟ್ರದ ಅಸ್ತಿತ್ವ-ಉತ್ಕರ್ಷ-ಅಪಕರ್ಷಗಳ ಪ್ರಮುಖಕಾರಣರಾದ ಗೃಹಸ್ಥಾಶ್ರಮಿಗಳಲ್ಲಿ ಈ ಮಹಾದೋಷತ್ರಯಗಳು ಇರಲಾಗದೆಂದು ನಾರದರು ಧರ್ಮರಾಜನಿಗೆ ಹೇಳಿರುವರು. ಈ ಮೂರು ಮಹಾದೋಷನಿವಾರಣದ ನಿಶ್ಚಿತ ಉಪಾಯವೆಂದರೆ ಧರ್ಮಾನುಸರಣವು. ಧರ್ಮಾನುಸರಣದಿಂದ ನೀಚತ್ವವು ಹೋಗುವದು; ಧರ್ಮಮೂಲವಾಗಿ ಅರ್ಥಸಂಪಾದನಮಾಡುವದರಿಂದ ಆತ್ಮಘಾತದ ಪ್ರಸಂಗವು

ತಪ್ಪುವದು; ಧರ್ಮದಂತೆ ಸ್ತ್ರೀಸಂಭೋಗಮಾಡುವವರಿಂದ ಬಲರಕ್ಷಣ ವಾಗಿ, ಬಲಿಷ್ಠಸಂತತಿಯ ಪರಂಪರೆಯುಂಟಾಗುವದು. ಅಂತೇ ರಾಷ್ಟ್ರದ ಅಭ್ಯುದಯಕ್ಕೆ ಧರ್ಮಾನುಸರಣವು ಅವಶ್ಯವಾಗಿರುವದು.

**ಧರ್ಮವು ಅಭ್ಯುದಯಕ್ಕೆ ಬಾಧಕವಲ್ಲ, ಸಾಧಕವಾಗಿರುವದು-** ಒಟ್ಟಿನಲ್ಲಿ ಹೇಳತಕ್ಕದ್ದೇನಂದರೆ—ಬ್ರಹ್ಮಚಾರಿ, ವಾನಪ್ರಸ್ಥ, ಸನ್ಯಾಸಿ ಇವರಿಗೆ ತಮ್ಮ ತಮ್ಮ ಧರ್ಮಪಾಲನದಹೊರತು ಧನಸಂಪಾದನ—ಸ್ತ್ರೀಸಂಭೋಗ ಇವು ನಿಷೇಧವಾಗಿದ್ದರೂ, ಗೃಹಸ್ಥಾಶ್ರಮಿಗಳು ಇವನ್ನು ಧರ್ಮಕ್ಕನುಸರಿಸಿ, ಅಂದರೆ ನಿಯಮಿತವಾಗಿ ಮಾಡಬೇಕೆಂದು ನಾರದರು ಧರ್ಮರಾಜನಿಗೆ ಹೇಳಿರುವರು; ಆದರೆ ಗೃಹಸ್ಥನು ಧರ್ಮ—ಅರ್ಥ—ಕಾಮಗಳಲ್ಲಿ ಯಾವನೊಂದರ ಅತಿರೇಕಮಾಡುವದು ದೋಷವಾದದ್ದರಿಂದ, ಅವುಗಳ ನಿಯಮನ ಮಾಡುವದಕ್ಕಾಗಿ, ಪೂರ್ವಾಹ್ನದಲ್ಲಿ ನಿತ್ಯನೈಮಿತ್ತಿಕಕರ್ಮಗಳನ್ನು, ಅಂದರೆ ದೇವತಾರ್ಚನಾದಿ ಆತ್ಮಶುದ್ಧಿಯ ಧರ್ಮಕಾರ್ಯಗಳನ್ನು ಮಾಡಬೇಕೆಂತಲೂ, ಮಧ್ಯಾಹ್ನದಲ್ಲಿ ಸಂಸಾರಯಾತ್ರೆಯ ಸಾಧನವಾದ ಧನವನ್ನು ಧರ್ಮದಂತೆ ಸಂಪಾದಿಸಬೇಕೆಂತಲೂ, ಸಾಯಾಹ್ನದಲ್ಲಿ ಹಾಗು ಅದರ ತರುವಾಯ ಪ್ರಜಾವೃದ್ಧಿಗಾಗಿಧರ್ಮಕ್ಕನುಸರಿಸಿ ವಿಷಯಭೋಗ ಮಾಡಬೇಕೆಂತಲೂ ಶ್ರುತಿಯು ಕಟ್ಟಳೆಮಾಡಿರುವದು. ಹೀಗೆ ಶ್ರುತಿಯ ಕಾಲವಿಭಾಗದಿಂದ ಈ ಮೂರನ್ನೂ ಸಂಪಾದಿಸದೆ ಬರಿಯ ಧರ್ಮವನ್ನೇ ಯಾವಾಗಲೂ ಸಂಪಾದಿಸಿದರೆ, ಅರ್ಥ—ಕಾಮಗಳ ಹಾನಿಯಾಗಿ ಕುಟುಂಬ ಘಾತವಾಗುವದು; ಮತ್ತು ಯಾವಾಗಲೂ ಧನವನ್ನೇ ಸಂಪಾದಿಸಿದರೆ, ಧರ್ಮ—ಕಾಮಗಳ ನಾಶವಾಗಿ ಅದರಿಂದ ಕ್ರಮವಾಗಿ ಉಚ್ಚಲೋಕಸುಖ ಪ್ರಾಪ್ತಿ—ಐಹಿಕಸುಖಭೋಗ ಇವುಗಳ ನಾಶವಾಗುವದು; ಅದರಂತೆ ಯಾವಾಗಲೂ ಕಾಮುಕನಾಗಿ ಸ್ತ್ರೀಸಂಭೋಗಾಸಕ್ತನಾದರೆಧರ್ಮ—ಅರ್ಥಗಳ ನಾಶವಾಗಿ ಅದರಿಂದ ಕ್ರಮವಾಗಿ ಶಾರೀರ ದೌರ್ಬಲ್ಯವೂ, ದಾರಿದ್ರ್ಯ ದುಃಖವೂ ಪ್ರಾಪ್ತವಾಗುವವು. ಆದ್ದರಿಂದ ಧರ್ಮ—ಅರ್ಥ—ಕಾಮಗಳಲ್ಲಿ ಯಾವದರನಾಶವೂ ಆಗಬಾರದೆಂದು ಶ್ರುತಿಯು ಅವುಗಳ ಸಂಪಾದನದಕಾಲ ನಿಯಮನಮಾಡಿ ಸಾಂಸಾರಿಕರ, ಅರ್ಥಾತ್ ಜಗತ್ತಿನ ಕಲ್ಯಾಣ ಮಾಡಿರುವದು. ಜಗತ್ತಿನಲ್ಲಿ ಮುಮುಕ್ಷುಗಳೂ,ಮುಕ್ತರೂ ಉತ್ತರೋತ್ತರ ವಿಲರಾ

ಗಿದ್ದು, ಸಾಂಸಾರಿಕರಿಂದಲೇ ಅದು ತುಂಬಿರುವದೆಂದು ಮೇಲೆ ಹೇಳಿರುವದರಿಂದ, ಸಾಂಸಾರಿಕರ ಕಲ್ಯಾಣವೇ ಜಗತ್ತಿನ ಕಲ್ಯಾಣವೆಂದು ತಿಳಿಯುಬೇಕು. ಒಟ್ಟಿಗೆ, ಸಾಂಸಾರಿಕರು ಎಲ್ಲವನ್ನೂ ಧರ್ಮಕ್ಕನುಸರಿಸಿ ಮಾಡಿದರೆಯೇ ಇಹ–ಪರಗಳ ಅಭ್ಯುದಯವಾಗುವದರಿಂದ, ಧರ್ಮವು ಅಭ್ಯುದಯಕ್ಕೆ ಬಾಧಕವಾಗಿರದೆ ಕೇವಲ ಸಾಧಕವಾಗಿರುತ್ತದೆಂದು ತಿಳಿಯತಕ್ಕದ್ದು. ಕಲಿಯುಗದಲ್ಲಿ ವಿಷಯತೃಷ್ಣೆಯು ಹೆಚ್ಚುವದರಿಂದ, ಈ ಶ್ರುತಿಯ ಕಟ್ಟಳೆಯನ್ನು ನಡಿಸುವದಾಗದೆ ಸಾಂಸಾರಿಕರು ಧರ್ಮವನ್ನು ಪರಿತ್ಯಜಿಸಿ ಸ್ವಚ್ಛಂದವಾಗಿ ದ್ರವ್ಯತೃಷ್ಣೆ–ಸ್ತ್ರೀಸಂಭೋಗಗಳಲ್ಲಿ ಮಗ್ನರಾಗುವದರಿಂದ ಉಂಟಾಗುವ ದುಃಖಪರಂಪರೆಗಾಗಿ ಧರ್ಮದ ಹೆಸರಿನಿಂದ ಕಲ್ಲುಒಡೆಯುವದು ಮೂರ್ಖತನದ ಲಕ್ಷಣವಾಗಿರುವದು. ಸದ್ಯದಲ್ಲಿ ನಮ್ಮ ಸಣ್ಣ ಪುಟ್ಟ ಉದ್ಯೋಗಗಳುಕೂಡ ಪರದೇಶದವರ ಯಾಂತ್ರಿಕಸುಧಾರಣೆಗೆ ಬಲಿಯಾಗಿ, ನಾವು ಪರದೇಶದವರ ವಿಷಯಾಸಕ್ತಿಯುಸವಿಗೆ ಬಿದ್ದದ್ದರಿಂದ ನಾವು ನಿರುದ್ಯೋಗದಿಂದ ದರಿದ್ರರೂ, ವಿಷಯಾಸಕ್ತಿಯಿಂದ ಬಲಹೀನರೂ ಆಗಿ ಪರತಂತ್ರರಾಗಿರುವೆವು; ಆದರೆ ಮೇಲೆಹೇಳಿದ ಶ್ರುತಿಯ ನಿಯಮದಂತೆ ಪ್ರತಿಯೊಬ್ಬ ಗೃಹಸ್ಥಾಶ್ರಮಿಯು ಧರ್ಮಮೂಲ ಉದ್ಯೋಗದಿಂದ ಅರ್ಥವನ್ನು ಸಂಪಾದಿಸಿ, ಧರ್ಮದಂತೆ ವಿಷಯವನ್ನು ಉಪಭೋಗಿಸಹತ್ತಿದರೆ, ರಾಷ್ಟ್ರದ ದಾರಿದ್ರ್ಯನಾಶವಾಗಿ ಅದರ ಬಲವುಹೆಚ್ಚಲು, ರಾಷ್ಟ್ರದ ಅಭ್ಯುದಯಕ್ಕಾಗಿ ಮಂದಿಯಮೋರೆ ನೋಡುವ ಪ್ರಸಂಗವು ಬರಲಾರದು; ಆದ್ದರಿಂದ ಧರ್ಮವು ಅಭ್ಯುದಯಕ್ಕೆ ಬಾಧಕವಲ್ಲ, ಸಾಧಕವಾಗಿರುತ್ತದೆಂದು ನಿಶ್ಚಯವಾಗಿ ತಿಳಿಯತಕ್ಕದ್ದು.

---

## ೩ ರಾಷ್ಟ್ರೀಯರ ಕರ್ತವ್ಯಚ್ಯುತಿಯು ರಾಷ್ಟ್ರವಿಘಾತಕವು.

ರಾಷ್ಟ್ರೀಯರು—ಅವರವರ ಧರ್ಮಕ್ಕನುಸರಿಸಿ ಐಹಿಕಸುಖೋಪಭೋಗವನ್ನು ನಿರ್ಬಾಧವಾಗಿ ಭೋಗಿಸುವ ಆಸ್ಪದವುಳ್ಳ ಪ್ರಜೆಗಳಿದ್ದ, ಹಾಗು ಧರ್ಮಿಷ್ಠರಾಜನ ಆಳಿಕೆಗೆ ಒಳಪಟ್ಟಿರುವ ಪ್ರದೇಶವನ್ನು ರಾಷ್ಟ್ರವೆಂದು ಕರೆಯು

ಬಹುದು. ಅಂತಹ ರಾಷ್ಟ್ರದೊಳಗಿದ್ದ ರಾಜಪ್ರಜರೇ ರಾಷ್ಟ್ರೀಯರು. ಯಾವದೊಂದು ರಾಷ್ಟ್ರದೊಳಗಿನ ರಾಜನು ತನ್ನ ರಾಷ್ಟ್ರದೊಳಗಿನ ಪ್ರಜೆಗಳ ನಿಯಮನವನ್ನು ತನ್ನ ರಾಜಧರ್ಮಕ್ಕನುಸರಿಸಿ ಪುತ್ರವಾತ್ಸಲ್ಯದಿಂದ ಮಾಡುತ್ತಿದ್ದು, ಆತನ ಪ್ರಜೆಗಳು ತಮ್ಮ ಪ್ರಜಾಧರ್ಮಕ್ಕನುಸರಿಸಿ ರಾಜನಿಗೆ ಪಿತೃಭಕ್ತಿಯಿಂದ ಅಧೀನರಾಗಿ ನಡೆದುಕೊಳ್ಳುತ್ತಿದ್ದರೆ, ಆ ಸುವ್ಯವಸ್ಥಿತ ರಾಜ್ಯ ಪದ್ಧತಿಗೆ ಧರ್ಮನಿಷ್ಠ ರಾಜ್ಯಪದ್ಧತಿಯೆಂತಲೂ, ಅಂತಹ ಸುವ್ಯವಸ್ಥಿತ ರಾಜ್ಯಕ್ಕೆ ಸುರಾಜ್ಯವೆಂತಲೂ ಅನ್ನತಕ್ಕದ್ದು. ಈ ಧರ್ಮನಿಷ್ಠ ರಾಜ್ಯಪದ್ಧತಿಯಲ್ಲಿ ರಾಜಪ್ರಜರಿಬ್ಬರೂ ಧರ್ಮಾಧಿಷ್ಠಾನವುಳ್ಳವರು, ಅಂದರೆ ತಮ್ಮ ತಮ್ಮ ಧರ್ಮಗಳನ್ನು ಅತಿಕ್ರಮಿಸಿ ನಡೆಯದವರು ಇರುವದರಿಂದ, ಈ ಪವಿತ್ರ ರಾಜ್ಯಪದ್ಧತಿಯಲ್ಲಿ ಸ್ವಾರ್ಥಪರತೆಗೆ ಆಸ್ಪದವಿಲ್ಲದಾಗಿ, ರಾಜಪ್ರಜರಿಬ್ಬರೂ ತಮ್ಮ ತಮ್ಮ ಧರ್ಮಮಾರ್ಗಗಳ ಬಿಟ್ಟು ಅಡ್ಡಹಾಯಿಂದ ಒಬ್ಬರನ್ನೊಬ್ಬರು ಬಲಾತ್ಕರಿಸುವ ಪ್ರಸಂಗವು ಬರುವದಿಲ್ಲ. ಇಂತಹ ರಾಜ್ಯವನ್ನು ಸುರಾಜ್ಯವೆಂದೇ ಅಲ್ಲ, ಸ್ವರಾಜ್ಯವೆಂತಲೂ ಕರೆಯಬಹುದು; ಯಾಕಂದರೆ ರಾಜಪ್ರಜರಿಬ್ಬರೂ ಅಹಂಕಾರರಹಿತರಾಗಿ ತಮ್ಮ ತಮ್ಮ ಧರ್ಮಪಾಲನಮಾಡಿದ ಸಮಾಧಾನದಿಂದ ಪರಸ್ಪರರನ್ನು ಸ್ವಕೀಯರೆಂದೇ ಭಾವಿಸಿ, ಪಿತಾ—ಪುತ್ರರಂತೆ ಆತ್ಮೀಯಭಾವದಿಂದ ನಡೆದುಕೊಳ್ಳುತ್ತಿರುವರು. ಇಂತಹ ಸುರಾಜ್ಯ—ಸ್ವರಾಜ್ಯಗಳ ಉದಾಹರಣವೆಂದರೆ ನಮ್ಮಲ್ಲಿಯ ರಾಮರಾಜ್ಯವು. ಈ ರಾಮರಾಜ್ಯದ ಪ್ರಜೆಗಳು ರಾಮರಾಜನನ್ನು ತಮ್ಮ ತಂದೆಯೆಂದು ತಿಳಿಯುತ್ತಿದ್ದು, ತಮ್ಮ ಆ ತಂದೆಯ ರಾಜ್ಯವು ತಮ್ಮ ರಾಜ್ಯವೆಂತಲೇ ತಿಳಿಯುತ್ತಿದ್ದರು; ಅದರಂತೆ ರಾಮರಾಜನು ತನ್ನ ಪ್ರಜೆಗಳನ್ನು ತನ್ನ ಮಕ್ಕಳೆಂದು ತಿಳಿಯುತ್ತಿದ್ದು, ತನ್ನ ರಾಜ್ಯವು ತನ್ನ ಆ ಮಕ್ಕಳರಾಜ್ಯವೆಂದು ತಿಳಿಯುತ್ತಿದ್ದನು. ಹೀಗೆ ರಾಮರಾಜ್ಯವು ರಾಜ—ಪ್ರಜರಿಬ್ಬರಿಗೂ ಸುಖ—ಶಾಂತಿಕರವಾದದ್ದರಿಂದ ಅದನ್ನು ಸುರಾಜ್ಯವೆಂತಲೂ, ಆ ರಾಮರಾಜ್ಯದ ವಿಷಯವಾಗಿ ರಾಜ—ಪ್ರಜರಿಬ್ಬರಲ್ಲಿಯೂ ಸ್ವಕೀಯಭಾವವಿದ್ದದ್ದರಿಂದ ಅದನ್ನು ಸ್ವರಾಜ್ಯವೆಂತಲೂ ಕರೆಯಬಹುದು.

**ರಾಷ್ಟ್ರೀಯರ ಕರ್ತವ್ಯ**—ರಾಷ್ಟ್ರೀಯರಲ್ಲಿ ಪುರುಷರು, ಸ್ತ್ರೀಯರು ಎಂಬ ಎರಡು ಭೇದಗಳು ಇರುವವು. ಆಸ್ತ್ರೀಪುರುಷರಲ್ಲಿಯೂ ವೃದ್ಧರು,

ತರುಣರು, ಹುಡುಗರು ಎಂಬ ಮೂರು ಪ್ರಭೇದಗಳು ಇರುತ್ತವೆ. ಈ ಭೇದ ಪ್ರಭೇದಗಳಿದ್ದಂತೆ ಅವರವರ ಕರ್ತವ್ಯಗಳೂ ಭಿನ್ನಭಿನ್ನವಾಗಿರುತ್ತವೆಂದು ತಿಳಿಯತಕ್ಕದ್ದು. ರಾಷ್ಟ್ರದೊಳಗಿನ ತರುಣಪುರುಷರು ಪ್ರಾಮುಖ್ಯವಾಗಿ ಉದ್ಯೋಗಮಾಡಿ ಧರ್ಮದಂತೆ ಧನಸಂಪಾದಿಸುವ ತಮ್ಮ ಕರ್ತವ್ಯವನ್ನು ಮಾಡತಕ್ಕದ್ದು. ತರುಣಸ್ತ್ರೀಯರು ಪ್ರಾಮುಖ್ಯವಾಗಿ ಪುರುಷರಿಂದ ಸುರಕ್ಷಿತೆಯರಾಗಿ ಪುರುಷರು ಸಂಪಾದಿಸಿತಂದ ಧನದ ಯೋಗ್ಯ ವಿನಿಯೋಗ ಮಾಡಿ ವಿಧೇಯತ್ವದಿಂದಸಂಸಾರದ ಸುಖವನ್ನು ಹೆಚ್ಚಿಸುವ ತಮ್ಮ ಕರ್ತವ್ಯವನ್ನುಮಾಡತಕ್ಕದ್ದು. ಅದರಂತೆ ವೃದ್ಧ ಸ್ತ್ರೀಪುರುಷರು ತಮ್ಮ ಅನುಭವದಿಂದ ತರುಣರಿಗೂ, ಹುಡುಗರಿಗೂ ಹಿತದಮಾರ್ಗವನ್ನು ತೋರಿಸುವ ತಮ್ಮ ಕರ್ತವ್ಯವನ್ನುಮಾಡತಕ್ಕದ್ದು; ಹಾಗೆಯೇ ಹುಡುಗರು ಗುರುಹಿರಿಯರಆಜ್ಞಾಧಾರಕರಾಗಿ ಅವರ ಯೋಗ್ಯಶಿಕ್ಷಣದಿಂದ ತಮ್ಮ ಶರೀರಸಾಮರ್ಥ್ಯ-ಬುದ್ಧಿಸಾಮರ್ಥ್ಯಗಳನ್ನೂ, ನೀತಿನಡತೆಗಳನ್ನೂ, ತಮ್ಮ ಒಲವಿಗನುಸರಿಸಿದ ಉದ್ಯೋಗ-ವ್ಯವಹಾರಗಳ ಜ್ಞಾನವನ್ನೂ ಸಂಪಾದಿಸಿ, ಯೋಗ್ಯನಾಗರಿಕರಾಗುವ ತಮ್ಮ ಕರ್ತವ್ಯವನ್ನು ಮಾಡತಕ್ಕದ್ದು. ಈ ರಾಷ್ಟ್ರೀಯ ಕರ್ತವ್ಯದ ಮರ್ಯಾದೆಗಳನ್ನು ಆವರವರು ಪಾಲಿಸುತ್ತ, ಪರಸ್ಪರರ ಹಿತಸಂಬಂಧವನ್ನು ಕಾಯ್ದುಕೊಂಡು ಒಬ್ಬರನ್ನೊಬ್ಬರು ಅನುಸರಿಸಿ ನಡೆದರೆ, ರಾಷ್ಟ್ರದ ಪುರುಷರಲ್ಲಿ ಪೌರುಷವೂ, ಸ್ತ್ರೀಯರಲ್ಲಿ ವಿಧೇಯತ್ವವೂ, ಹುಡುಗರಲ್ಲಿ ಆಜ್ಞಾಧಾರಕತೆಯೂ ಉಂಟಾಗಿ, ರಾಷ್ಟ್ರದಲ್ಲಿ ಸುಖ-ಶಾಂತಿಗಳು ನೆಲೆಗೊಂಡು, ರಾಷ್ಟ್ರದ ಸಂಸಾರಯಾತ್ರೆಯು ಸುಸೂತ್ರವಾಗಿನಡೆಯುವದು. ಆ ರಾಷ್ಟ್ರದ ಸಂಸಾರಯಾತ್ರೆಗೆ ಕಾರಣಾಂತರದಿಂದ ಪರರಾಷ್ಟ್ರದ ಬಾಧೆತಟ್ಟಿದರೆ ತಟ್ಟಬಹುದಲ್ಲದೆ, ಆ ರಾಷ್ಟ್ರದೊಳಗಿನ ರಾಷ್ಟ್ರೀಯರಿಂದ, ಅಂದರೆ ರಾಜನಿಂದ ಪ್ರಜೆಗಳಿಗೆ, ಪ್ರಜೆಗಳಿಂದ ರಾಜನಿಗೆ, ಪ್ರಜೆಗಳಿಂದ ಪ್ರಜೆಗಳಿಗೆ ಬಾಧೆಯು ತಟ್ಟಲಾರದು.

**ರಾಷ್ಟ್ರಘಾತಕತೆಯು**—ಕುಟುಂಬದೊಳಗಿನ ಅಣ್ಣತಮ್ಮಂದಿರು ಸ್ವಾರ್ಥಪರಾಯಣರಾಗಿ ಕುಟುಂಬದ ಸಾಮಾನ್ಯ ಹಿತವನ್ನು ಲಕ್ಷಿಸಬೇಕೆಂಬ ಕೌಟುಂಬಿಕ ಧರ್ಮವನ್ನು ಉಲ್ಲಂಘಿಸಿ, ತಮ್ಮ ಹಾಗು ತಮ್ಮ ಹೆಂಡಿರುಮಕ್ಕಳ ಹಿತವನ್ನಷ್ಟೇ ಲಕ್ಷಿಸಿ, ಉಳಿದ ಅಣ್ಣತಮ್ಮಂದಿರ ಅಹಿತಮಾಡ

ಹತ್ತಿದರೆ, ಕೌಟುಂಬಿಕ ಕಲಹವು ಉತ್ಪನ್ನವಾಗಿ ಕುಟುಂಬಘಾತವಾಗುವದು ಪ್ರಸಿದ್ಧವಾಗಿರುತ್ತದೆ. ಅದರಂತೆ ರಾಷ್ಟ್ರೀಯ ಬಂಧುಗಳೆನಿಸುವ ಬೇರೆ ಬೇರೆ ವ್ಯಕ್ತಿಗಳೂ, ಸಮಾಜಗಳೂ, ಜಾತಿಗಳೂ ಸ್ವಾರ್ಥಪರಾಯಣಗಳಾಗಿ ಮೇಲೆ ಹೇಳಿರುವ ರಾಷ್ಟ್ರೀಯ ಹಿತಸಂಬಂಧವನ್ನು ಲಕ್ಷಿಸದೆ ತಮ್ಮ ಕರ್ತವ್ಯಚ್ಯುತರಾಗಿ ತಮ್ಮ ಹಾಗು ತಮ್ಮವರ, ಅಂದರೆ ತಮ್ಮ ವೈಯಕ್ತಿಕ, ತಮ್ಮ ಸಾಮಾಜಿಕ, ತಮ್ಮ ಜಾತಿವಿಷಯಕ ಹಿತವನ್ನಷ್ಟೇ ಬಹುಮತದ ಬಲದಿಂದ ಸಾಧಿಸತೊಡಗಿ, ಅನ್ಯವಕ್ತಿ-ಸಮಾಜ-ಜಾತಿವಿಷಯಕಹಿತಕ್ಕೆ ಬಾಧೆತಂದರೆ, ರಾಷ್ಟ್ರದಲ್ಲಿ ಮಾತ್ಸರ್ಯಮೂಲಕ ತಾಪ-ಕಲಹಗಳುಂಟಾಗಿ ರಾಷ್ಟ್ರಘಾತವು ಆಗತೊಡಗುವದು. ಇಂತಹ ರಾಷ್ಟ್ರಘಾತದ ಸ್ವಾರ್ಥಪರತೆಯಭಾವಉಳ್ಳವರಿಗೆ ರಾಷ್ಟ್ರಘಾತಕರೆನ್ನುವರು. ಇಂತಹ ರಾಷ್ಟ್ರಘಾತಕರು, ಮೇಲೆಹೇಳಿದ ತಮ್ಮ ರಾಷ್ಟ್ರೀಯಕರ್ತವ್ಯಗಳನ್ನು ಪಾಲಿಸದೆ ತಮ್ಮ ಮನಸ್ಸಿಗೆ ಬಂದಂತೆ ನಡೆಯುವರು. ಇಂತಹ ರಾಷ್ಟ್ರಘಾತಕರ ನಡತೆಯನ್ನು ಕುರಿತು ಸಭಾಪರ್ವದ ೧೬ ನೇ ಪುಟದಲ್ಲಿ ದೇವರ್ಷಿಗಳಾದ ನಾರದರು ಧರ್ಮರಾಜನನ್ನು ಕುರಿತು ಹೇಳಿದ್ದನ್ನು ಇಲ್ಲಿ ಉದಾಹರಣವಾಗಿ ಕೊಡುವೆವು. ನಾರದರು ಧರ್ಮರಾಜನನ್ನು ಕುರಿತು— " ಯುಧಿಷ್ಠಿರಾ, ಪ್ರಜೆಗಳ ಸಂತೋಷ, ಒಕ್ಕಲಿಗರ ಉತ್ಸಾಹ ಇವೆರಡು ಐಶ್ವರ್ಯವೃದ್ಧಿಯ ನಿಶ್ಚಿತಕಾರಣಗಳಾಗಿರುವವು. ( ೧ ) ರಾಷ್ಟ್ರದಲ್ಲಿ ಕಳ್ಳರ, ಹಾಗು ಮೋಸಗಾರರ ಸುಳಿಪಾಟವಾದರೆ, ಅಥವಾ ( ೨ ) ತರುಣರ ಅಥವಾ ಸ್ತ್ರೀಯರ ಪ್ರಾಬಲ್ಯವಾಗಿ, ಪ್ರೌಢರ ಹಾಗು ಬಹುಶ್ರುತರ ವರ್ಚಸ್ಸು ನಷ್ಟವಾದರೆ, ಅಥವಾ ( ೩ ) ಅರಸನೇ ಮದಾಂಧನಾಗಿ ಪ್ರಜೆಗಳನ್ನು ಸುಲಿಯಹತ್ತಿದರೆ ಪ್ರಜೆಗಳ ಹಾಗು ಒಕ್ಕಲಿಗರ ಪೂರ್ಣನಾಶವಾಶವಾಯಿತೆಂದು ತಿಳಿಯಬೇಕು " ಎಂದು ಹೇಳಿರುವರು.

**ರಾಷ್ಟ್ರಘಾತದ ಸ್ಪಷ್ಟೀಕರಣ**—ಮೇಲೆ ಹೇಳಿರುವ ನಾರದರಉಪದೇಶವು ಬಹು ಮಹತ್ವದ್ದಾಗಿರುವದು. ಯಾವದೊಂದು ರಾಷ್ಟ್ರವು ಕಾಲಮಹಿಮೆಯಿಂದ ವಿಷಯಾಸಕ್ತವಾಗಿ ಧರ್ಮಹಾನಿಪಡೆದು ಅಧಃಪತನ ಹೊಂದಿದಾಗ, ಆ ರಾಷ್ಟ್ರದಲ್ಲಿ ನಾರದರು ಹೇಳಿದ ಈ ರಾಷ್ಟ್ರಘಾತಕ ಲಕ್ಷಣಗಳು ಕಂಡು

ಬರುವವು. ನಾರದರು ಪ್ರಜೆಗಳ ಸಂತೋಷ, ಒಕ್ಕಲಿಗರ ಉತ್ಸಾಹ ಇವು ಐಶ್ವರ್ಯವೃದ್ಧಿಯ, ಅರ್ಥಾತ್ ರಾಷ್ಟ್ರೋತ್ಕರ್ಷದ ನಿಶ್ಚಿತ ಕಾರಣಗಳಾಗಿರುತ್ತವೆಂದು ಹೇಳಿ, ಆ ಪ್ರಜೆಗಳ, ಹಾಗು ಒಕ್ಕಲಿಗರ ಪೂರ್ಣನಾಶಕ್ಕೆ ಮುಂದಿನ ಮೂರು ಕಾರಣಗಳನ್ನು ಹೇಳಿರುವರು. ಅವುಗಳಲ್ಲಿ ಒಂದನೆಯ ಕಾರಣವು, ರಾಷ್ಟ್ರದಲ್ಲಿ ಕಳ್ಳರ ಹಾಗು ಮೋಸಗಾರರ ಸುಳಿದಾಟವಾಗುವದು; ಎರಡನೆಯ ಕಾರಣವು, ಸ್ತ್ರೀಯರ ಹಾಗುತರುಣರ ಪ್ರಾಬಲ್ಯವಾಗಿ ಪ್ರೌಢರ ಹಾಗು ಬಹುಶ್ರುತರ ವರ್ಚಸ್ಸು ನಷ್ಟವಾಗುವದು; ಮೂರನೆಯ ಕಾರಣವು ಅರಸನೇ ಮದಾಂಧನಾಗಿ ಪ್ರಜೆಗಳನ್ನು ಸುಲಿಯಹತ್ತುವದು ಆಗಿರುವವು.

**೧ ಕಳ್ಳರ ಹಾಗು ಮೋಸಗಾರರ ಹೆಚ್ಚಳದಿಂದಾಗುವ ರಾಷ್ಟ್ರನಾಶ**—ರಾಷ್ಟ್ರದಲ್ಲಿ ಕಳ್ಳರ ಹಾಗು ಮೋಸಗಾರರ ಸುಳಿದಾಟವಾಗಬೇಕಾದರೆ, ಪ್ರಜೆಗಳು ಪ್ರಾಮುಖ್ಯವಾಗಿ ಧರ್ಮಭ್ರಷ್ಟತೆಯಿಂದ ವಿಷಯಾಸಕ್ತರೂ, ನಿರುದ್ಯೋಗಿಗಳೂ ಆಗಿ ಬಡವರಾಗಿರಬೇಕಾಗುವದು. ರಾಷ್ಟ್ರವು ಧರ್ಮಾನುಸರಣದಿಂದ ಪವಿತ್ರವೂ, ಉದ್ಯೋಗತತ್ಪರತೆಯಿಂದ ಧನ-ಧಾನ್ಯಸಂಪನ್ನವೂ ಆಗಿರುವಾಗ ಕಳ್ಳರ ಹಾಗು ಮೋಸಗಾರರ ಸುಳಿದಾಟಕ್ಕೆ ಕಾರಣವು ಇರುವದಿಲ್ಲ. ನಮ್ಮ ದೇಶದಲ್ಲಿ ಹಿಂದಕ್ಕೆ ಈ ಸುಸ್ಥಿತಿಯು ಇರುವಾಗ ಮನೆಗಳಿಗೆ ಕೀಲಿಗಳು ಬೇಕಾಗುತ್ತಿದ್ದಿಲ್ಲವೆಂದು ಮುಂತಾಗಿ ನಮ್ಮ ದೇಶದ ಸುಸ್ಥಿತಿಯನ್ನು ಮೆಗಾಸ್ಥಿನೀಸನಂಥ ಪರದೇಶದವರೂ ಬರೆದಿಟ್ಟಿದ್ದಾರೆ. ಧರ್ಮಶ್ರದ್ಧೆಯ ಪಾಪಪುಣ್ಯಗಳ ಭಯವೂ, ವಿವಿಧ ಉದ್ಯೋಗಗಳ ಪ್ರಭಾವದ ಧನ–ಧಾನ್ಯಾದಿಗಳ ಸುಸಂಪನ್ನತೆಯೂ ಕಳವು ಮೋಸಗಾರಿಕೆಗಳಿಗೆ ಪ್ರತಿಬಂಧಕಗಳಾಗಿರುವವು; ಆದ್ದರಿಂದ ಯಾವದೊಂದು ರಾಷ್ಟ್ರದಲ್ಲಿ ಕಳವು ಮೋಸಗಾರಿಕೆಗಳು ಹೆಚ್ಚಿದಮಾನದಿಂದ ಆ ರಾಷ್ಟ್ರವು ಧರ್ಮಹೀನವೂ, ನಿರುದ್ಯೋಗಿಯೂ, ವಿಷಯಾಸಕ್ತವೂ ಆಗಿ ಅಧಃಪತನಹೊಂದತೊಡಗಿರುವದೆಂದು ತಿಳಿಯಬೇಕು. ಕಳವು ಮೋಸಗಾರಿಕೆಗಳಲ್ಲಿ, ಕಳವು ಪರರಸೊತ್ತನ್ನು ಅಪಹರಿಸುವ ನೀಚೋಪಾಯವಾಗಿದ್ದರೆ, ಮೋಸಗಾರಿಕೆಯು ಪರರಸೊತ್ತನ್ನು ಅಪಹರಿಸುವ ನೀಚತಮ ಉಪಾಯವಾಗಿರುವದು. ಪರಿಣಾಮತಃ ಕಳವು ಮೋಸಗಾರಿಕೆಗಳಲ್ಲಿ ಭೇದವಿರುವದಿಲ್ಲ; ಯಾಕಂದರೆ ಅವೆರಡರ ಹೇತುವು ಪರರ ಸೊತ್ತನ್ನು ಅಪಹರಿಸುವದೇ ಆಗಿರುತ್ತದೆ. ಆದರೆ ಕಳ್ಳನು ಕಳ್ಳನೆನಿ

ಸಿಕೊಂಡು ಪರರ ಸೊತ್ತನ್ನು ಅಪಹರಿಸುವ ನೀಚನು ಆಗಿದ್ದರೆ, ಮೋಸಗಾರನು ಸಂಪನ್ನನೆನಿಸಿ ಪರರ ಸೊತ್ತನ್ನು ಅಪಹರಿಸುವ ನೀಚತಮನು ಆಗಿರುವನು. ಈ ಎರಡು ನೀಚತನಗಳ, ಅಂದರೆ ಧರ್ಮಭ್ರಷ್ಟತೆಯ ಪರಿಣಾಮಗಳ ಪ್ರಸಾರವು ರಾಷ್ಟ್ರದಲ್ಲಿ ಆದಮಾನದಿಂದ ಪ್ರಜೆಗಳ, ಹಾಗು ಒಕ್ಕಲಿಗರ ವಿತ್ತಜೀವಿತಗಳ ಅನಿಶ್ಚಿತತೆಯುಂಟಾಗಿ, ಪ್ರಜೆಗಳು ಅಸಂತುಷ್ಟರೂ, ಒಕ್ಕಲಿಗರು ಉತ್ಸಾಹಹೀನರೂ ಆಗಲು, ಪ್ರಜೆಗಳ ವಿವಿಧೋದ್ಯೋಗಗಳಿಗೂ, ಒಕ್ಕಲಿಗರ ಒಕ್ಕಲತನಕ್ಕೂ ಉತ್ತೇಜನವು ದೊರೆಯದೆ ಅವುಗಳ ಹ್ರಾಸದ ಮೂಲಕ ರಾಷ್ಟ್ರವು ಅವನತಿಯನ್ನು ಹೊಂದತೊಡಗುವದು. ಅದರಲ್ಲಿ ಧರ್ಮಭ್ರಷ್ಟರೂ, ಉದ್ಯೋಗಹೀನರೂ, ವಿಷಯಾಸಕ್ತರೂ ಆದ ಪ್ರಜೆಗಳ ಉದ್ಯೋಗವ್ಯವಹಾರಗಳು ಪರದೇಶದವರಕೈಯಲ್ಲಿ ಸೇರಿದರಂತು, ರಾಷ್ಟ್ರದ ದಾರಿದ್ರ್ಯ-ದೌರ್ಬಲ್ಯಗಳು ಮತ್ತಿಷ್ಟುಹೆಚ್ಚಿ ರಾಷ್ಟ್ರದ ನಾಳಿನ ನಾಶವು ಇಂದಿಗೇ ಆಗುವದೆಂದು ತಿಳಿಯಬೇಕು.

**೨ ರಾಷ್ಟ್ರದಲ್ಲಿ ಹೆಂಗಸರ ಹಾಗು ತರುಣರ ಪ್ರಾಬಲ್ಯದಿಂದಾಗುವ ರಾಷ್ಟ್ರನಾಶ**—ನಾರದರ ಮತದಂತೆ ರಾಷ್ಟ್ರದೊಳಗೆ ಕಳ್ಳರು ಹಾಗು ಮೋಸಗಾರರ ಸುಳಿದಾಟದಿಂದಾಗುವ ರಾಷ್ಟ್ರನಾಶವನ್ನು ಮೇಲೆ ಹೇಳಿದೆಯಷ್ಟೆ? ಆ ರಾಷ್ಟ್ರನಾಶದ ನಿವಾರಣೋಪಾಯಗಳಾದ ಧರ್ಮಾಭಿವೃದ್ಧಿಯೂ, ಉದ್ಯೋಗತತ್ಪರತೆಯೂ ರಾಷ್ಟ್ರದಲ್ಲಿ ಉದಯವಾಗದಿದ್ದರೆ ರಾಷ್ಟ್ರವು ಹೆಚ್ಚು ಹೆಚ್ಚು ಬಲಗುಂದುತ್ತ, ದರಿದ್ರವಾಗುತ್ತ ಪೌರುಷಹೀನವಾಗಲು, ಆ ಪತಿತರಾಷ್ಟ್ರದಲ್ಲಿ ಸ್ತ್ರೀಯರ ಹಾಗು ತರುಣರ ಪ್ರಾಬಲ್ಯವಾಗುವದು. ಇಂತಹ ಪ್ರಾಬಲ್ಯವು ಕುಟುಂಬದಲ್ಲಿ ಆದಾಗ ಕುಟುಂಬದ ನಾಶವಾಗುವಂತೆ, ರಾಷ್ಟ್ರದಲ್ಲಾದಾಗ ರಾಷ್ಟ್ರದನಾಶವು ಹೇಗಾಗುವದೆಂಬದನ್ನು ನಾರದರ ಮತದಂತೆ ಈಗ ವಿವರಿಸುವೆವು. ಹೀಗೆ ರಾಷ್ಟ್ರದಲ್ಲಿ ಅನುಭವಹೀನರೂ, ಚಂಚಲವೃತ್ತಿಯವರೂ, ಸ್ವೇಚ್ಛಾಚಾರಕ್ಕೆ ಮೆಚ್ಚಿದವರೂ ಆದ ಸ್ತ್ರೀಯರ ಹಾಗುತರುಣರಪ್ರಾಬಲ್ಯವಾಗಲು, ಪ್ರೌಢರ ಹಾಗು ಬಹುಶ್ರುತರ ವರ್ಚಸ್ಸು ಕಡಿಮೆಯಾಗುವದು; ಸ್ತ್ರೀಯರ ಹಾಗು ತರುಣರ ಸ್ವಭಾವಗುಣವಾದ ಹಟಮಾರಿತನವೇ ಕಾರ್ಯಸಾಧನೋಪಾಯವಾಗಲು, ರಾಷ್ಟ್ರದ ಪೌರುಷವು ನಷ್ಟವಾಗುವದು; ವರ್ಣಾಶ್ರಮಾದಿಗಳೂ, ಧರ್ಮಶಾಸ್ತ್ರಾದಿಗಳೂ ತಿರಸ್ಕರಿಸಲ್ಪಡುವವು; ಧರ್ಮದ

ಬಂಧನವು ಹರಿದುಹೋಗಿ ಸ್ವಚ್ಛಂದಾಚರಣೆಯು ಬೆಳೆಯುವದು; ಸ್ವಚ್ಛಂದಾಚರಣೆಗೆ ಆಸ್ಪದಕೊಡುವ ಮುಖಂಡರಿಗೇ ಪ್ರಾಶಸ್ತ್ಯವು ದೊರೆತು, ವಿಶೇಷವಾಗಿ ತಾಳಗೆಟ್ಟ ಸ್ತ್ರೀಯರ ಹಾಗು ತರುಣರ ಹಿಂಡು ಆ ಮುಖಂಡರ ಸೂತ್ರಚಾಲನದಂತೆ ಕುಣಿಯತೊಡಗಲು, ಕಿಂಕರ್ತವ್ಯಬುದ್ಧಿಯ ಅವಿವೇಕಿ ಸಾಮಾನ್ಯಜನಸಮೂಹವು ಆ ತರುಣರ ಕುಣಿತಕ್ಕಾಗಿ ಕೌತುಕಪಟ್ಟು ಹಿಂದುಮುಂದಿನ ವಿಚಾರವಿಲ್ಲದೆ ಅವರ ಅನುಕರಣ ಮಾಡತೊಡಗುವದು. ಈರೀತಿಯು ರಾಷ್ಟ್ರಘಾತಕವೆಂದು ತಿಳಿದು ಪ್ರೌಢರೂ, ಬಹುಶ್ರುತರೂ ಇತಿಹಾಸ, ಶಾಸ್ತ್ರ, ಅನುಭವ ಮೊದಲಾದವನ್ನು ಮುಂದೆಮಾಡಿ, ಸ್ವಚ್ಛಂದವಾಗಿ ಕುಣಿಯುವವರನ್ನು ನಿಷೇಧಿಸಿ, ರಾಷ್ಟ್ರವನ್ನು ಹಾದಿಗೆ ಹಚ್ಚುವ ಯತ್ನ ಮಾಡಲು, ದುರಭಿಮಾನಿಗಳಾದ ಆ ಅವಿವೇಕಿಗಳು ಸಂಘಶ್ಶೇನ ಬಹುಮತದ ಬಲಪಡೆದು, ಆ ಪ್ರೌಢರ ಹಾಗು ಬಹುಶ್ರುತರ ಹಿತಕಾರಕ ವಿಚಾರಗಳನ್ನು ಧಿಕ್ಕರಿಸಿ ಅವರ ತೇಜೋಭಂಗಮಾಡುವರು. ಹೀಗೆ ಉಪದೇಶಾದಿಗಳಿಗೆ ಹಣಿಯದ ಆ ದಂಡಸಾಧ್ಯರಿಗೆ ರಾಜಶಾಸನದ ಬಿಸಿಯುಹತ್ತದಿದ್ದರೆ ರಾಷ್ಟ್ರದತುಂಬ ಹಟಮಾರಿತನ-ಉಲಕೋಚಿತನಗಳ ಗೊಂದಲವೆದ್ದು, ಸ್ತ್ರೀಯರ ಹಾಗು ತರುಣರ ಚೇಷ್ಟೆಗಳಿಗೆ ಉಕ್ಕುಬರುವದು.

ಹೀಗೆ ರಾಷ್ಟ್ರದಲ್ಲಿಯ ಹಿತಕಾರಕವಾದ ಪುರುಷರಪೌರುಷ, ಸ್ತ್ರೀಯರ ವಿಧೇಯತ್ವ, ಹುಡುಗರ ಆಜ್ಞಾಧಾರಕತೆ ಇವು ನಷ್ಟವಾಗಿ ಅವರೆಲ್ಲರೂ ಕರ್ತವ್ಯಭ್ರಷ್ಟರಾಗಲು, ರಾಷ್ಟ್ರದಲ್ಲಿ ಹಟಮಾರಿತನದ ಗೊಂದಲವೆದ್ದು, ರಾಷ್ಟ್ರದ ವ್ಯವಹಾರೋದ್ಯೋಗಗಳು ನಿಂತುಹೋಗಿ ತರುಣರ ನ್ಯಾಯದ ದ್ರವ್ಯಸಂಪಾದನ, ಹೆಂಗಸರಮನೆಗೆಲಸ, ಹುಡುಗರ ವಿದ್ಯಾಭ್ಯಾಸ, ಪ್ರೌಢರ ಹಾಗು ಬಹುಶ್ರುತರ ಹಿತೋಪದೇಶ ಇವೆಲ್ಲ ಮಣ್ಣುಗೂಡಿ ರಾಷ್ಟ್ರದಲ್ಲಿ ನೋಡಿದತ್ತಚಿಂತೆ, ಪಶ್ಚಾತ್ತಾಪ, ದುಃಖ, ಹಾಹಾಃಕಾರಗಳುಂಟಾಗುವವು. ರಾಷ್ಟ್ರದಲ್ಲಿ ಇಂತಹ ದುಸ್ಥಿತಿಯುಂಟಾದರೂ ನಿಜವಾದರಾಷ್ಟ್ರಹಿತದ ಯಾವ ಮಹಾಕಾರ್ಯವೂ ಸಾಧಿಸದೆ, ಮತ್ತಿಷ್ಟು ರಾಷ್ಟ್ರದ ಅವನತಿಯಾಗತೊಡಗಿ, ರಾಷ್ಟ್ರದ ಹಟಮಾರಿತನಕ್ಕೆ (ಸತ್ಯಾಗ್ರಹಕ್ಕೆ) ಏನೂಫಲದೊರೆಯದಾಗಲು, ಆಸತ್ಯಾಗ್ರಹಾಭಿಮಾನಿಗಳು, ತಮ್ಮ ಸತ್ಯಾಗ್ರಹವನ್ನು ರಾಷ್ಟ್ರಕಲ್ಯಾಣದ ಮುಖ್ಯಕಾರಣವಾದ ಧರ್ಮದನಾಶಮಾಡುವದಕ್ಕಾಗಿ ಉಪಯೋಗಿಸುವರು.

“ ಉದ್ಯೋಗವಿಲ್ಲದ ಬಡಿಗೆಯು ಮಗನ××ಕೆತ್ತಿದನೆಂ” ಬಂತೆ ಇವರ ಈಕೃತಿಯು ಹಾಸ್ಯಾಸ್ಪದವಾದದ್ದೆಂಬದರಲ್ಲಿ ಸಂಶಯವಿಲ್ಲ. ಧರ್ಮದ ಮುಖ್ಯ ಜೀವಾಳವು ಸ್ಪೃಶ್ಯಾಸ್ಪೃಶ್ಯತೆಯ ತಾರತಮ್ಯಪಾಲನವು ಆಗಿರುವದು; ಯಾಕಂದರೆ ಜಗತ್ತಿನ ಯಾವತ್ತು ಧರ್ಮಗಳು ವಿಧಿ-ನಿಷೇಧಾತ್ಮಕ ನಿಯಮಗಳ ಸಮುಚ್ಚಯಗಳಾಗಿದ್ದು, ಧರ್ಮದೊಳಗಿನ ವಿಧಿಯ ನಿಯಮಗಳು ಗ್ರಾಹ್ಯಗಳು, ಅಂದರೆ ಸ್ಪೃಶ್ಯಗಳೂ, ನಿಷೇಧದ ನಿಯಮಗಳು ತ್ಯಾಜ್ಯಗಳು ಅಂದರೆ ಅಸ್ಪೃಶ್ಯಗಳೂ ಆಗಿರುವದರಿಂದ, ಒಂದಿಲ್ಲೊಂದು ಬಗೆಯ ಸ್ಪೃಶ್ಯಾಸ್ಪೃಶ್ಯತೆಯು ಎಲ್ಲ ಧರ್ಮಗಳಿಗೂ ಸಂಬಂಧಿಸಿರುವದು. ಅಂದಬಳಿಕ ಅಸ್ಪೃಶ್ಯತೆಯ ನಿವಾರಣಮಾಡುವದೆಂದರೆ, ಜಗತ್ತಿನ ಧರ್ಮಬಂಧನಗಳನ್ನೆಲ್ಲ ನಾಶಮಾಡಿ ಸಬ್‌ಗೋಲಂಕಾರದ ಸ್ವಚ್ಛಂದವೃತ್ತಿಯನ್ನು ಬಳಿಕೆಯಲ್ಲಿತಂದು ಪಶುತ್ವಕ್ಕೆ ಉತ್ತೇಜನಕೊಟ್ಟು ಜಗತ್ತಿನ ನಾಶಕ್ಕಾಗಿ ಯತ್ನಿಸಿದಂತೆಯೇಸರಿ. ಈಧರ್ಮನಾಶವು ಈಶ್ವರೀಸಂಕೇತದಂತೆ ಯುಗಾಂತರವಾದಂತೆ ತಾನೇ ಆಗುತ್ತಬರುತ್ತಿದ್ದು, ಕಡೆಗೆ ಆ ಧರ್ಮನಾಶದ ಪೂರ್ಣತೆಯೇ ಜಗತ್ತಿನ ನಾಶವಾಗಿದ್ದರೂ, ಬುದ್ಧಿಪೂರ್ವಕವಾಗಿ ನಾಳಿನನಾಶವನ್ನು ಇವತ್ತೇ ಬರಮಾಡುವದು ವಿವೇಕಿಗಳ ಕೆಲಸವಲ್ಲ. ಈ ಅಸ್ಪೃಶ್ಯತಾ ನಿವಾರಣದಲ್ಲಿ ಮೋಸಮಾಡಲಿಕ್ಕೂ ಮುಖಂಡರು ಹಿಂದೆ ಮುಂದೆ ನೋಡುವದಿಲ್ಲ. ಇವರು ದೇಶಕಲ್ಯಾಣಮಾಡುವವರಂತೆ ಏನೇನೋ ಸೋಗುಮಾಡಿ, ಮೊದಲು ಕೂಡಿಕಾರ್ಯಮಾಡುವಮಟ್ಟಿಗೆ ಅಸ್ಪೃಶ್ಯತಾನಿವಾರಣವನ್ನು, ಆಮೇಲೆ ಕೂಡಿ ಜಲಾಶಯಬಳಿಸುವಮಟ್ಟಿಗೆ ಅಸ್ಪೃಶ್ಯತಾನಿವಾರಣವನ್ನು, ಆಮೇಲೆ ಕೂಡಿ ದೇವತಾರಾಧನಮಾಡುವ ಮಟ್ಟಿಗೆ ಅಸ್ಪೃಶ್ಯತಾ ನಿವಾರಣವನ್ನು, ಆಮೇಲೆಸಹ ಭೋಜನದಮಟ್ಟಿಗೆ ಅಸ್ಪೃಶ್ಯತಾನಿವಾರಣವನ್ನು, ಆಮೇಲೆ ಕಟ್ಟಕಡೆಗೆ ಸ್ಪೃಶ್ಯಾಸ್ಪೃಶ್ಯರ ಶರೀರಸಂಬಂಧಕ್ಕಾಗಿ ಅಸ್ಪೃಶ್ಯತಾನಿವಾರಣವನ್ನು ಮಾಡಿ, ಹೀಗೆ ಮೋಸಗಾರಿಕೆಯಿಂದ ಧರ್ಮನಾಶವು ಭರದಿಂದ ಆಗಲಿಕ್ಕೆ ಹಾದಿಯನ್ನು ಮಾಡಿಕೊಡುವರು. ಈ ಮಹಾತ್ಮರು ಬರಿಯಮೋಸಗಾರಿಕೆಮಾಡಿಯೇ ತಮ್ಮ ಕಾಯಕ ನಡಿಸಿ ತೃಪ್ತರಾಗುವದಿಲ್ಲ; ತಮ್ಮ ಸ್ತ್ರೀವೃತ್ತಿ-ತರುಣವೃತ್ತಿಯ ಅನುಯಾಯಿಗಳ ಹಿಂಡಿನ ಬಹುಮತದ ಬಲದಿಂದ ರಾಜಾಶ್ರಯ ಪಡೆದು ಬಲಾತ್ಕಾರಮಾಡಿ ಅಸ್ಪೃಶ್ಯತಾನಿವಾರಣವನ್ನು, ಅರ್ಥಾತ್ ಧರ್ಮನಾ

ಶವನ್ನು ಮಾಡಲಿಕ್ಕೂ ಹೇಸುವದಿಲ್ಲ. ಇಂತಹ ಹಲವು ಅನರ್ಥಗಳು ತಾಳಗೆಟ್ಟ ರಾಷ್ಟ್ರೀಯರ, ಅಂದರೆ ಪ್ರಬಲರಾದ ಸ್ತ್ರೀಯರ ಹಾಗು ತರುಣರ ಅವಿವೇಕಿತನದ ದುರಭಿಮಾನದಿಂದಲೇ ಆಗುವದರಿಂದ, ದೇವರ್ಷಿನಾರದರು ಈ ದುಸ್ಥಿತಿಯು ರಾಷ್ಟ್ರನಾಶಕ್ಕೆ ಕಾರಣವೆಂದು ಧರ್ಮರಾಜನಿಗೆ ಹೇಳಿರುವರು.

೩ **ಮದಾಂಧರಾಜನ ಸುಲಿಗೆಯಿಂದಾಗುವ ರಾಷ್ಟ್ರನಾಶವು**—ಹೀಗೆ ರಾಷ್ಟ್ರದಲ್ಲಿ ಸ್ತ್ರೀಯರ ಹಾಗು ತರುಣರ ಪ್ರಾಬಲ್ಯವಾದಾಗಲು, ಅವರ ಹಟಮಾರಿತನ-ಕಿಡಿಗೇಡಿತನಗಳಿಂದ ರಾಷ್ಟ್ರದ ಮುಖ್ಯನಾದ ರಾಜನಿಗೆ ತೊಂದರೆಯಾಗುವದು. ಈ ಪ್ರಸಂಗದಲ್ಲಿ ರಾಜನು ವಿವೇಕಿಯಾಗಿದ್ದರೆ, ಕುಟುಂಬದ ಯಜಮಾನನು ತನ್ನ ಕುಟುಂಬದೊಳಗಿನ ಹೆಂಗಸರ ಹಾಗು ತರುಣರ ಇಂತಹ ತೊಂದರೆಯನ್ನು ಸಾಮೋಪಾಯಗಳಿಂದ ದೂರ ಮಾಡಲು ಯತ್ನಿಸುವನು; ಆದರೆ ತಾಳಗೆಟ್ಟ ಈ ಸ್ವಚ್ಛಂದಿಗಳು ಆ ಸಾಮೋಪಾಯಕ್ಕೆ ಹಣಿಯದಿದ್ದರೆ, ವಿವಿಧ ಸೌಮ್ಯಭೇದೋಪಾಯದಂಡೋಪಾಯಗಳನ್ನುಮಾಡಿಅವರ ಚೇಷ್ಟೆಗಳನ್ನು ನಿಲ್ಲಿಸುವನು; ಆದರೆ ರಾಜನು ವಿವೇಕಿಯಾಗಿರದೆ ಅವಿವೇಕಿಯೂ, ಮದಾಂಧನೂ ಆಗಿದ್ದರೆ ಮನೆಮುರಕ ಯಜಮಾನನಂತೆ ಪ್ರಜೆಗಳ ಸುಲಿಗೆಮಾಡುವದೇ ಮೊದಲಾದ ಕ್ರೂರಉಪಾಯಗಳಿಂದ ರಾಷ್ಟ್ರೀಯರ ಈ ಚೇಷ್ಟೆಗಳನ್ನು ಬಗ್ಗುಬಡಿಯುವನು. ಮದಾಂಧರಾಜನು, ತನ್ನ ಚಕ್ಕಂದಕ್ಕಾಗಿ ಪ್ರಜೆಗಳನ್ನು ಮನಸ್ಸಿಗೆಬಂದಂತೆ ನಿಷ್ಕಾರಣವಾಗಿಯೂ ಸುಲಿಯಬಹುದು. ಹೀಗೆ ಯಾವದೊಂದು ಕಾರಣದಿಂದ ಬೇಲಿಯು ಎದ್ದು ಹೊಲವನ್ನು ಮೇಯಹತ್ತಿದರೆ, ರಾಷ್ಟ್ರದ ನಾಶವಾಗದೆ ಹೇಗೆ ಉಳಿಯಬೇಕು? ಅಂತೇ ದೇವರ್ಷಿನಾರದರು, ಮದಾಂಧರಾಜರ ಸುಲಿಗೆಯಿಂದಲೂ ರಾಷ್ಟ್ರನಾಶವಾಗುವದೆಂದು ಹೇಳಿರುವರು.

**ಪ್ರಜೆಗಳ ಅಸಂತೋಷ, ಒಕ್ಕಲಿಗರ ಉತ್ಸಾಹಭಂಗಗಳಿಂದ ರಾಷ್ಟ್ರನಾಶ**—ಹೀಗೆ ದೇವರ್ಷಿನಾರದರು ಧರ್ಮರಾಜನಿಗೆ ಹೇಳಿದ ರಾಷ್ಟ್ರನಾಶದ ಮೂರು ಕಾರಣಗಳು ರಾಷ್ಟ್ರದಲ್ಲಿ ಉತ್ಪನ್ನವಾಗಿ ಈಬಗೆಯ ಅನರ್ಥವು ಉಂಟಾಗಲು, ಪ್ರಜೆಗಳ ಅಸಂತುಷ್ಟತೆಯು ಸ್ವಾಭಾವಿಕವಾಗಿಯೇ ಹೆಚ್ಚುವದು. ಹೀಗೆ ಅಸಂತುಷ್ಟರಾದ ಪ್ರಜೆಗಳು ತಮ್ಮ ಯಾವತ್ತು ಉದ್ಯೋಗಗಳನ್ನು ಪರಕೀಯರಿಗೆ ಒಪ್ಪಿಸಿ, ಆ ಪರಕೀಯರು ದ್ರವ್ಯಶೋಷಣಮಾ

ಡುತ್ತ ನಡೆದಿರುವಾಗ, ತಮ್ಮ ಧನಸಂಪಾದನದ ಮಾರ್ಗಗಳು ಕಟ್ಟಾಗಲು, ದರಿದ್ರರಾಗಿಹೋದ ಆ ಪ್ರಜೆಗಳು ತಮ್ಮಲ್ಲಿಯ ಒಕ್ಕಲಿಗರು ಬೆಳೆಯುವ ಕಾಳುಕಡಿಗಳಿಗೆ ಯೋಗ್ಯ ಪ್ರತಿಫಲವನ್ನೂ, ಉತ್ತೇಜನವನ್ನೂ ಕೊಡಲು ಅಸಮರ್ಥರಾಗುವರು. ಈ ಸ್ಥಿತಿಯಲ್ಲಿ ಒಕ್ಕಲಿಗರೂ ದರಿದ್ರರಲ್ಲಿ ದರಿದ್ರರಾಗಲು, ಅವರು ನಿಶ್ಚಯವಾಗಿ ಉತ್ಸಾಹಹೀನರಾಗಿ ತಮ್ಮ ಒಕ್ಕಲತನದ ಉದ್ಯೋಗದ ವಿಷಯದಲ್ಲಿ ಉದಾಸೀನರಾಗುವರು. ಅಂದಬಳಿಕ ರಾಷ್ಟ್ರದ ಮುಖ್ಯ ಉಪಜೀವನ ಸಾಧನವಾದ ಒಕ್ಕಲತನವೇ ಕುಗ್ಗಿದಬಳಿಕ ರಾಷ್ಟ್ರವು ಕೂಳಿಗೆ ಕೂಡ ಎರವಾಗಬೇಕಾಗುವ ಸರ್ವನಾಶದ ಕಾರಣವು ಉಂಟಾಗಬಹುದು. ಇದನ್ನು ರಿತೇ ನಾರದರು ಪ್ರಜೆಗಳ ಅಸಂತುಷ್ಟತೆ, ಒಕ್ಕಲಿಗರ ಉತ್ಸಾಹಭಂಗ ಇವುಗಳಿಂದ ರಾಷ್ಟ್ರನಾಶವಾಗುವದೆಂದು ಸ್ಪಷ್ಟವಾಗಿ ಹೇಳಿರುವರು.

**ತರಣೋಪಾಯ-ದಿಗ್ದರ್ಶನ**—ಹೀಗೆ ರಾಷ್ಟ್ರನಾಶವಾಗದೆ ರಾಷ್ಟ್ರದ ಕಲ್ಯಾಣವಾಗಬೇಕೆಂದು ಇಚ್ಛಿಸುವ ಪ್ರಜೆಗಳು "ಮಂದಿಯನ್ನು ಕೆಡಿಸಹೋಗುವವನು ಮೊದಲು ತಾನು ಕೆಡಬೇಕಾಗುವದೆ" ಂಬದನ್ನೂ, "ತನ್ನ ಎಲೆಯಲ್ಲಿ ಕತ್ತೆ ಸತ್ತುಬಿದ್ದಿರಲು, ಮಂಡಿಯ ಎಲೆಯ ನೊಣಜಾಡಿಸಹೋಗುವದು ಯೋಗ್ಯವಲ್ಲವೆಂ" ಬದನ್ನೂ "ತನ್ನ ಒಳಿತು ಕೆಡಕುಗಳಿಗೆ ಪರರಿಗಿಂತ ತಾನೇ ಮುಖ್ಯ ಕಾರಣನೆಂ" ಬದನ್ನೂ ಲಕ್ಷದಲ್ಲಿಟ್ಟು, ಇಷ್ಟಾರ್ಥದ ಪೂರ್ತಿಗಾಗಿ ತಮ್ಮ ಮುಖ್ಯನಾದ ಅರಸನೊಡನೆ, ತಮ್ಮ ಬಂಧುಗಳಾದ ತಮ್ಮತಮ್ಮೊಳಗೆ ಅಸಹಕಾರಬಳಿಸುವ ತಮ್ಮ ಘಾತಕತನವನ್ನು ಬಿಟ್ಟುಕೊಟ್ಟು, ಮೇಲೆ ಹೇಳಿರುವ ತಮ್ಮ ತಮ್ಮ ಕರ್ತವ್ಯಗಳಲ್ಲಿ ತೊಡಗಬೇಕು; ಅಂದರೆ ಪುರುಷರು ಪೌರುಷಿಗಳಾಗಿ ತಮ್ಮ ತಮ್ಮ ಒಲವಿಗನುಸರಿಸಿದ, ಅಥವಾ ತಮ್ಮ ಜಾತಿನಿಷ್ಠವಾದ ಉದ್ಯೋಗಗಳನ್ನು ಮನಃಪೂರ್ವಕವಾಗಿ ಮಾಡಿ ಅದರಲ್ಲಿ ಪ್ರಾವೀಣ್ಯವನ್ನು ಪಡೆದು ಧನಸಂಪನ್ನರಾಗಬೇಕು; ಹೆಂಗಸರು ಇಲ್ಲದ ಚೇಷ್ಟೆಗೆಹೋಗದೆ ತಮ್ಮ ಸ್ವಾಭಾವಿಕವಾದ ಸ್ತ್ರೀಧರ್ಮಕ್ಕನುಸರಿಸಿ ಪುರುಷರಿಗೆ ವಿಧೇಯರಾಗಿ ಮನೆಗೆಲಸದಲ್ಲಿ ತೊಡಗಬೇಕು. ಗಂಡಸರಿಗೇ ಮನೆಯ ಹೊರಗಿನ ಕೆಲಸಗಳು ಉಳಿಯದಿರುವ ರಾಷ್ಟ್ರದ ಹೀನ ಸ್ಥಿತಿಯಲ್ಲಿ, ಹೆಂಗಸರು ತಮ್ಮ ಮನೆಗೆಲಸಬಿಟ್ಟು ಮನೆಯ ಹೊರಗಿನ ಕೆಲಸಗಳಿಗಾಗಿ ಟೊಂಕಕಟ್ಟಿ ಗಂಡರಾಮಿಯರಾಗಿ ಹೊರಬೀಳುವಲ್ಲಿ ಕುಟುಂಬಘಾ

ಶವಲ್ಲದೆ ಬೇರೆ ಲಾಭವೇನು ಆಗಬೇಕು? ಗಂಡಸರು ಗಂಡಸರಾಗಿಯೂ, ಹೆಂಗಸರು ಹೆಂಗಸರಾಗಿಯೂ ನಡೆಯುವದರಲ್ಲಿಯೇ ಸ್ವಪರಹಿತವಿರುವದಲ್ಲದೆ, ಗಂಡಸರು ಹೆಂಗಸರಂತೆಯೂ, ಹೆಂಗಸರು ಗಂಡಸರಂತೆಯೂ ನಡೆಯುವದರಲ್ಲಿ, ಸರ್ವಥಾ ಲಾಭವಿಲ್ಲೆಂದು ತಿಳಿದುಕೊಳ್ಳುವಷ್ಟು ಗಂಡಸರೂ ಹೆಂಗಸರೂ ವಿವೇಕಿಗಳಾಗಬೇಕು. ರಾಷ್ಟ್ರೀಯರೆಲ್ಲರೂ ಸದಭಿಮಾನದಿಂದ ಸ್ವರಾಷ್ಟ್ರೀಯ ಒಡವೆಗಳಿಗೇ ಉತ್ತೇಜನ ಕೊಡಬೇಕು. ಹುಡುಗರು ಗುರುಹಿರಿಯರ ಆಜ್ಞೆಯಲ್ಲಿದ್ದು, ಪ್ರಾಮುಖ್ಯವಾಗಿ ಜ್ಞಾನವರ್ಧಕ ಹಾಗು ಉದ್ಯೋಗೋನ್ಮುಖಶಿಕ್ಷಣವನ್ನು ಹೊಂದುತ್ತಾ, ಬ್ರಹ್ಮಚರ್ಯಪಾಲನಪೂರ್ವಕವಾಗಿ ದೇಹಬಲ, ಬುದ್ಧಿಬಲ, ನೀತಿಬಲಗಳನ್ನು ಹೆಚ್ಚಿಸಿಕೊಂಡು ರಾಷ್ಟ್ರಹಿತಾಭಿವರ್ಧಕವಾದ ವಿವಿಧ ಉದ್ಯೋಗಗಳನ್ನು ಮಾಡುವಪಾತ್ರತೆ ಪಡೆಯಬೇಕು. ರಾಷ್ಟ್ರದೊಳಗಿನ ಪ್ರೌಢರೂ ಬಹುಶ್ರುತರೂ ರಾಷ್ಟ್ರದ ಕಲ್ಯಾಣದ ಮಾರ್ಗವನ್ನು ನಿಸ್ಪೃಹತೆಯಿಂದ ಹೇಳುತ್ತಾ ತಾವು ಅದರಂತೆ ನಡೆದು ತೋರಿಸಬೇಕು. ಅಂದರೆ ಇಂತಹ ಸಂಪನ್ನಪ್ರಜೆಗಳ ರಾಜನು ಎಂತಹ ವಿಷಯಾಸಕ್ತನೂ, ಬಲಿಷ್ಠನೂ, ದುಷ್ಟನೂ ಇದ್ದರೂ ಪ್ರಜೆಗಳನ್ನು ಗೌರವಿಸಬೇಕಾಗುವದು. ಹೀಗೆ ರಾಷ್ಟ್ರದೊಳಗೆ ರಾಜಪ್ರಜರಿಬ್ಬರೂ ಪರಸ್ಪರ ಗೌರವ–ಪ್ರೇಮಗಳಿಂದ ನಡೆದುಕೊಂಡರೆ, ಪ್ರಜೆಗಳಲ್ಲಿಯೇ ಜನ್ಮಸಿದ್ಧವಾಗಿಇದ್ದ ಸ್ವರಾಜ್ಯದ ಮೂರು ಪಾಲುಗಳನ್ನು ಪ್ರಜೆಗಳು ತಾವೇ ಪಡೆದಂತಾಗಿ, ಇನ್ನೊಂದುಪಾಲು ಸ್ವರಾಜ್ಯವು ಅರಸನಿಂದ ದೊರೆಯುದಿದ್ದರೂ, ಕಂಗಾಲತನದಿಂದ ಸ್ವರಾಜ್ಯಕ್ಕಾಗಿ ಸಿಕ್ಕಹಾಗೆ ತಡಬಡಿಸಿಎಡತಾಕುವ ನಾಚಿಕೆಗೇಡಿ ಪ್ರಸಂಗವುಪ್ರಜೆಗಳಿಗೆ ಬರಲಿಕ್ಕಿಲ್ಲ. ಮತ್ತು ಪ್ರತಿಬಂದು ಇಷ್ಟಾರ್ಥಸಾಧನಕ್ಕಾಗಿ ಅಧಾರ್ಮಿಕವಾದ ದುಷ್ಟ ಅಸಹಕಾರವನ್ನು ವಿವೇಕದ ತಾರತಮ್ಯವಿಲ್ಲದೆ ಸಿಕ್ಕಹಾಗೆ ಅನ್ಯರೊಡನೆ ಬಳಿಸುವ ಘಾತಕ ಪ್ರಸಂಗವೂ ಬರಲಿಕ್ಕಿಲ್ಲ! ಇಂತಹ ತರಣೋಪಾಯಗಳನ್ನು ಕೈಕೊಂಡು ದೇಹಪಾತಾಂತವಾಗಿ **ರಾಷ್ಟ್ರಕಲ್ಯಾಣಮಾಡುವ** ಸದ್ಬುದ್ಧಿಯನ್ನು ಸರ್ವೇಶ್ವರನು ರಾಷ್ಟ್ರಮುಖಂಡರಿಗೆ ಕೊಟ್ಟದಿನವೇ ರಾಷ್ಟ್ರವು ನಿಶ್ಚಯವಾಗಿ ಕಲ್ಯಾಣೋನ್ಮುಖವಾಗುವದು!

---

# ೪ ಹಳ್ಳಿಯ ಉತ್ಕರ್ಷವೇ ರಾಷ್ಟ್ರದ ಉತ್ಕರ್ಷವು.

**ರಾಷ್ಟ್ರದ ಉತ್ಕರ್ಷಾಪಕರ್ಷಗಳು**—ಮೇಲಿನ ೫೬ನೇ ರಹಸ್ಯ ದಲ್ಲಿ ರಾಷ್ಟ್ರವೆಂದರೆ—"ಅವರವರ ಧರ್ಮಕ್ಕನುಸರಿಸಿ ಐಹಿಕ ಸುಖೋಪ ಭೋಗವನ್ನು ನಿರ್ಬಾಧವಾಗಿ ಭೋಗಿಸುವ ಆಸ್ಪದವಿದ್ದ ಪ್ರಜೆಗಳಿರುವ, ಹಾಗು ಧರ್ಮಿಷ್ಠರಾಜನ ಆಳಿಕೆಗೆ ಒಳಪಟ್ಟಿರುವ ಪ್ರದೇಶ"ವೆಂದು ಹೇಳಿದೆ ಯಷ್ಟೆ? ಅಂತಹ ರಾಷ್ಟ್ರದ ಅಂಗಗಳು ಕ್ರಮವಾಗಿ—೧ ವ್ಯಕ್ತಿ, ೨ ಕುಟುಂಬ, ೩ ಸಮಾಜ, ೪ ಗ್ರಾಮ, ೫ ಪಟ್ಟಣ, ಪ್ರಾಂತ ಎಂಬವಾಗಿರುತ್ತವೆಂದು ಸಾಧಾರಣವಾಗಿ ಹೇಳಬಹುದು. ಅಂದಬಳಿಕ ರಾಷ್ಟ್ರದ ಉತ್ಕರ್ಷವೆಂದರೆ ಅದರ ಅವಯವಗಳಾದ ಈ ಹಳ್ಳಿಮೊದಲಾದವುಗಳ ಉತ್ಕರ್ಷವೆಂತಲೂ, ರಾಷ್ಟ್ರದ ಅಪಕರ್ಷವೆಂದರೆ ಈ ಹಳ್ಳಿಮೊದಲಾದವುಗಳ ಅಪಕರ್ಷವೆಂತಲೂ ತಿಳಿಯತಕ್ಕದ್ದು. ದೇಹದ ಸರ್ವಾಂಗಸುಂದರ ಪುಷ್ಟಿಯೆಂದರೆ, ಆ ದೇಹದ ಸರ್ವಾವಯವಗಳ ಸರ್ವಾಂಗಸುಂದರ ಪುಷ್ಟಿಯೆಂಬ ಮಾತನ್ನು ರಾಷ್ಟ್ರರೂಪ ಪುರುಷನ ದೇಹಕ್ಕೂ ಹಚ್ಚಿಕೊಳ್ಳಬೇಕಾಗುವದು.

**ಸ್ವಾಭಾವಿಕ ಹಾಗು ಕೃತ್ರಿಮ ಸಂಬಂಧಗಳು**—ಮೇಲೆ ದೇಹಕ್ಕೂ ದೇಹಾವಯವಗಳಿಗೂ, ರಾಷ್ಟ್ರಕ್ಕೂ ರಾಷ್ಟ್ರಾವಯವಗಳಿಗೂ ಸಂಬಂಧವಿರುತ್ತದೆಂದು ಹೇಳಿರುತ್ತದಷ್ಟೆ? ಆದರೆ ಆ ಸಂಬಂಧಗಳಲ್ಲಿ ದೊಡ್ಡ ಭೇದವಿರುತ್ತದೆಂಬದನ್ನು ಲಕ್ಷದಲ್ಲಿಡತಕ್ಕದ್ದು. ದೇಹಕ್ಕೂ ದೇಹಾವಯವಗಳಿ ಗೂಇರುವ ಅಪಹಾರ್ಯಸಂಬಂಧವು ಜನ್ಮಸಿದ್ಧವಾಗಿರುವದರಿಂದ, ಆ ಸಂಬಂ ಧವನ್ನು ಸ್ವಾಭಾವಿಕಸಂಬಂಧವೆಂತಲೂ, ರಾಷ್ಟ್ರಕ್ಕೂ ರಾಷ್ಟ್ರಾವಯವಗಳಿಗೂ ಇರುವಔಪಚಾರಿಕಸಂಬಂಧವು ಸುಖಹೇತು ಭೂತವಾಗಿರುವದರಿಂದ ಅದನ್ನು ಕೃತ್ರಿಮಸಂಬಂಧವೆಂತಲೂ ಕರೆಯತಕ್ಕದ್ದು. ಸ್ವಾಭಾವಿಕಸಂಬಂಧವಿದ್ದ ದೇಹದ ಮೇಲೆ ಆದ ಪರಿಣಾಮವೇ ಅದರ ಅವಯವಗಳಮೇಲೆ ಆಗುತ್ತದೆ; ಮತ್ತು ಅವಯವಗಳಮೇಲೆ ಆದಪರಿಣಾಮವೇ ದೇಹದ ಮೇಲೆ ಆಗುತ್ತದೆ.

ಅಂತೇ ಕಾಲಿಗೆ ಮುಳ್ಳು ನಟ್ಟಕೂಡಲೆ ಕಣ್ಣುಗಳಲ್ಲಿ ನೀರುಬಂದು ಇಡಿಯ ದೇಹಕ್ಕೆ ವ್ಯಥೆಯಾಗುವದಲ್ಲದೆ, ಆ ವ್ಯಥೆಯನ್ನು ದೂರಮಾಡಿಕೊಳ್ಳಲಿಕ್ಕೆ ಎಲ್ಲ ಅವಯವಗಳು ಹೆಣಗುವವು. ಅದರಂತೆ, ಒಂದು ಹೊಟ್ಟೆಯಲ್ಲಿ ಅನ್ನ ಬಿದ್ದಕೂಡಲೆ ದೇಹದ ಸರ್ವಾವಯವಗಳು ಹೃಷ್ಟಗಳೂ, ಪುಷ್ಟಗಳೂ ಆಗುವವು; ಆದ್ದರಿಂದ ದೇಹದ ಸ್ವಾಮಿಯಾದ ಜೀವನು ತನ್ನ ವಾಸಸ್ಥಳವಾದ ತನ್ನ ಇಡಿಯ ದೇಹದ ಪುಷ್ಟಿಯನ್ನು ಮಾಡಿದರೆ, ಆ ದೇಹದ ಪುಷ್ಟಿಯೇ ಆ ದೇಹದ ಸರ್ವಾವಯವಗಳ ಪುಷ್ಟಿಯು ಆಗಿಹೋಗುವದು; ಆದರೆ ಈ ಮಾತು ರಾಷ್ಟ್ರಕ್ಕೆ ಹತ್ತುವದಿಲ್ಲ. ಯಾಕಂದರೆ, ರಾಷ್ಟ್ರಕ್ಕೂ, ರಾಷ್ಟ್ರಾವಯವಗಳಿಗೂ ಇರುವ ಸಂಬಂಧವು ಮೇಲೆ ಹೇಳಿದಂತೆ ಕೃತ್ರಿಮವು, ಅಂದರೆ ಸುಖಹೇತುಭೂತವು ಆಗಿರುವದರಿಂದ, ಸುಖಕ್ಕೆ ಬಾಧೆಬಂದಲ್ಲಿ ತಂದೆಮಕ್ಕಳೂ ಸಂಬಂಧ ಕಡಕೊಂಡು ಸ್ವತಂತ್ರವಾಗಿ ಸುಖದಿಂದ ಜೀವಿಸುವಂತೆ, ರಾಷ್ಟ್ರದ ಔಪಚಾರಿಕ ಅವಯವಗಳೆನಿಸುವ ಆ ವ್ಯಕ್ತಿ, ಕುಟುಂಬ, ಸಮಾಜ, ಗ್ರಾಮಗಳು ರಾಷ್ಟ್ರಕ್ಕಿದ್ದ ತಮ್ಮ ಪರಸ್ಪರ ಸಂಬಂಧವನ್ನು ಕಡಿದುಕೊಂಡು ತಮ್ಮ ತಮ್ಮಷ್ಟಕ್ಕೆ ತಾವು ಸುಖದಿಂದ ಇರಬಹುದು; ಯಾಕಂದರೆ ಆ ವ್ಯಕ್ತಿ ಮೊದಲಾದವುಗಳಿಗೆ, ರಾಷ್ಟ್ರಕ್ಕಿದ್ದಂತೆ ಆಹಾರ-ವಿಹಾರ-ವ್ಯವಹಾರಗಳ ಸಂಬಂಧವಿದ್ದರೂ, ಅವವು ತಮ್ಮ ತಮ್ಮ ಆಹಾರ-ವಿಹಾರ-ವ್ಯವಹಾರಗಳ ವ್ಯವಸ್ಥೆಯನ್ನು ತಾವೇ ಮಾಡಿಕೊಳ್ಳಬೇಕಾಗುವದು. ತಾತ್ಕಾಲಿಕ ಸುಖಪ್ರೇರಿತಗಳಾದ ಮನುಷ್ಯೇತರ ಪ್ರಾಣಿಗಳೂ, ಉಚ್ಚತರ ಸುಖಾಕಾಂಕ್ಷಿಗಳಾದ ಆರಣ್ಯಕ ಋಷಿಗಳೂ ಈ ಕುಟುಂಬ-ಗ್ರಾಮಾದಿಗಳ ಸಂಬಂಧ ಮಾಡಿಕೊಳ್ಳದೆ ತಮ್ಮ ಯೋಗಕ್ಷೇಮವ ಸಾಗಿಸಿಕೊಳ್ಳುತ್ತಿರುವದನ್ನು ಇದಕ್ಕೆ ಉದಾಹರಣವಾಗಿ ಕೊಡಬಹುದು; ಆದ್ದರಿಂದ ರಾಷ್ಟ್ರಾಧಿಪತಿಯು ತನ್ನ ರಾಷ್ಟ್ರದ ಉತ್ಕರ್ಷವನ್ನು ಮಾಡುವದಾದರೆ ವ್ಯಕ್ತಿಯ ಉತ್ಕರ್ಷದ್ವಾರದಿಂದಲೇ ಕ್ರಮವಾಗಿ ಗ್ರಾಮಾದಿಗಳ ಉತ್ಕರ್ಷವನ್ನು ಮಾಡುತ್ತಹೋಗಿ, ರಾಷ್ಟ್ರದ ಘಟನೆಯನ್ನು ಮಾಡಬೇಕಾಗುದು. ಹಾಗೆ ಮಾಡದೆ ರಾಷ್ಟ್ರದಲ್ಲಿಯ ವ್ಯಕ್ತಿಯ ತಿದ್ದುಪಡೆಯನ್ನು ದುರ್ಲಕ್ಷಿಸಿ, ಪ್ರಜೆಗಳ ಕೌಟುಂಬಿಕ ಸ್ಥಿತಿಯಕಡೆಗೆ ಕಣ್ಣೆತ್ತಿನೋಡದೆ, ಹಳ್ಳಿಗಳನ್ನು ಹಾಳುಗೆಡವುತ್ತ, ಎರವಿನಜನರು ಪಟ್ಟಣದಲ್ಲಿ ತುಂಬಿಕೊಳ್ಳುವಂತೆ ಆಸ್ಪದವ

ನ್ನುಂಟುಮಾಡಿದರೆ ಸುಂದರವಾದ ಸಮರ್ಥರಾಷ್ಟ್ರದಘಟನೆಯು ಸರ್ವಥಾಆಗಲಾರದು. ಯಾಕಂದರೆ ರಾಷ್ಟ್ರವು ವ್ಯಕ್ತಿಮಯವಾಗಿದ್ದು, ರಕ್ತಸಂಬಂಧದ ವ್ಯಕ್ತಿಗಳ ಸಮುಚ್ಚಯದಿಂದ ಕುಟುಂಬಗಳೂ, ಒಂದೆಸಂಸ್ಕೃತಿಯ ಹಲವುಕುಟುಂಬಗಳ ಸಮುಚ್ಚಯದಿಂದ ಸಮಾಜಗಳೂ, ಪರಸ್ಪರ ಹಿತಸಂಬಂಧವುಳ್ಳ ಹಲವು ಸಮಾಜಗಳ ಸಮುಚ್ಚಯದಿಂದಹಳ್ಳಿಗಳೂ, ನಿರ್ಭಯತೆಯ ಹಾಗು ಸುಖಾಭಿವೃದ್ಧಿಯ ಪ್ರಾಪ್ತಿಯ ಏಕೀಕರಣದ ದೃಷ್ಟಿಯ ಹಲವು ಹಳ್ಳಿ-ಗ್ರಾಮ-ನಗರಾದಿಗಳ ಸಮುಚ್ಚಯದಿಂದ ರಾಷ್ಟ್ರವೂ ಆಗಿರುತ್ತವೆ; ಆದ್ದರಿಂದ ರಾಷ್ಟ್ರೋತ್ಕರ್ಷವೆಂದರೆ ಪ್ರಾಮುಖ್ಯವಾಗಿ ರಾಷ್ಟ್ರದೊಳಗಿನ ವ್ಯಕ್ತಿಗಳ ಉತ್ಕರ್ಷವೆಂದು ತಿಳಿಯತಕ್ಕದ್ದು; ಆದರೆ ವ್ಯಕ್ತಿ-ಕುಟುಂಬ-ಸಮಾಜಗಳಿಗಿಂತ ಹಳ್ಳಿಗಳಲ್ಲಿ ರಾಷ್ಟ್ರದ ಲಕ್ಷಣಗಳು ವ್ಯಕ್ತವಾಗಿ ತೋರುವವರಿಂದ, ಹಳ್ಳಿಯ ಉತ್ಕರ್ಷವೇ ರಾಷ್ಟ್ರದ ಉತ್ಕರ್ಷವೆಂದು ನಾವು ಹೇಳಿದೆವು.

**ದೇವರ್ಷಿ ನಾರದರ ಅಭಿಪ್ರಾಯ**—ನಮ್ಮ ಈ ಸಿದ್ಧಾಂತದ ಸಮರ್ಥನಕ್ಕಾಗಿ ಸಭಾಪರ್ವದ ೧೭ನೇ ಪುಟದಲ್ಲಿ ನಾರದರು ಧರ್ಮರಾಜನನ್ನು ಕುರಿತು ಪ್ರಶ್ನೆ ಮಾಡಿದ್ದನ್ನು ಇಲ್ಲಿ ಉಲ್ಲೇಖಿಸುವೆವು. ನಾರದರು ಧರ್ಮರಾಜನನ್ನು ಕುರಿತು—“ರಾಜಾ, ನಗರ ಮುಂತಾದವುಗಳನ್ನು ರಕ್ಷಿಸುವದಕ್ಕಾಗಿ ಗ್ರಾಮಗಳ, ಹಾಗು ಪ್ರಾಂತಗಳ(ಗಡಿನಾಡಿನ) ವ್ಯವಸ್ಥೆಯನ್ನು ಉತ್ತಮರೀತಿಯಿಂದ ಇಡಬೇಕು. ಗ್ರಾಮಗಳಲ್ಲಿ ಹಲವು ಜನ ಶೂರರಿದ್ದು, ಗ್ರಾಮಗಳಿಗೆ ಕ್ರಮವಾಗಿ ನಗರದ ಯೋಗ್ಯತೆಯು ಬರತೊಡಗಬೇಕು. ದೇಶದೊಳಗಿನ ಜನರಲ್ಲಿ ದಿನಾಲು ಈಪ್ರಕಾರದ ಸಾಮರ್ಥ್ಯವು ಹೆಚ್ಚಾಗುತ್ತ ಹೋಗಿ ರಾಜಕೀಯಭಾಂಡಾರದಲ್ಲಿ ದ್ರವ್ಯವು ಹೆಚ್ಚುತ್ತಹೋಗದಿದ್ದರೆ, ಆ ರಾಜನ ವೈಭವವೂ, ಅಧಿಕಾರವೂ ಹೆಚ್ಚದೆ ಆತನ ರಾಷ್ಟ್ರದ ಹ್ರಾಸವು ಒದಗುವ ಸಂಭವವು ಇರುವದು; ಆದ್ದರಿಂದ ಯುಧಿಷ್ಠಿರಾ, ಇದರಂತೆ ನಿನ್ನರಾಜ್ಯದಲ್ಲಿ ವ್ಯವಸ್ಥೆಯು ಇರುವದಷ್ಟೆ?” ಎಂದು ಕೇಳಿರುವರು; ಆದ್ದರಿಂದ ಹಳ್ಳಿಯ ಉತ್ಕರ್ಷಮಾಡಿದರೆ ತಾನೇ ರಾಷ್ಟ್ರದ ಉತ್ಕರ್ಷವಾಗುವದು.

**ಹಳ್ಳಿಯ ಹಿತದ ಮಿತಾಚರಣೆಯು**—“ಸರ್ವಂ ಪರವಶಂ ದುಃಖಂ ಸರ್ವಮಾತ್ಮವಶಂ ಸುಖಂ” ಎಂಬ ಗೌರವದ ಉಕ್ತಿಯು ಯಥಾ

ರ್ಥವಾದದ್ದು. ಈ ಉಕ್ತಿಗನುಸರಿಸಿ ವ್ಯಕ್ತಿಯಾಗಲಿ, ಕುಟುಂಬವಾಗಲಿ, ಸಮಾಜವಾಗಲಿ, ಹಳ್ಳಿಯಾಗಲಿ, ರಾಷ್ಟ್ರವಾಗಲಿ ತನ್ನ ಆಹಾರ-ವಿಹಾರ-ವ್ಯವಹಾರಗಳ ಸಂಬಂಧದಿಂದ ಪರವಶವಾಗದಿರುವದೇ ಅವವುಗಳ ಸ್ವರಾಜ್ಯದ ಮುಖ್ಯ ಲಕ್ಷಣವೆಂದು ತಿಳಿಯಬೇಕು. ಇಂತಹ ಸ್ವರಾಜ್ಯವನ್ನು ವನ್ಯ ಪಶುಪಕ್ಷಿಗಳು ಕೂಡ ಸ್ವಾಭಾವಿಕವಾದ ತಮ್ಮ ಮಿತಾಚರಣೆಯ ಮೂಲಕ ಭೋಗಿಸುತ್ತಿರುವವು. ಇಂತಹ ಸ್ವಾವಲಂಬನದ ಗೌರವದ ಮಿತಾಚರಣೆಯಿಂದ ಆರಣ್ಯಕ ವೃತ್ತಿಯ ಋಷಿಗಳು ಸಂಪೂರ್ಣ ಸ್ವರಾಜ್ಯವುಳ್ಳವರಾಗಿ ಜಗತ್ತಿನ ಹಂಗು ಇಲ್ಲದೆ ತಮ್ಮ ದೇಹಯಾತ್ರೆಯನ್ನು ತಾವೇ ಸಾಗಿಸುತ್ತ, ತಪಶ್ಚರ್ಯದಿಂದ ಅಲೌಕಿಕ ಸಾಮರ್ಥ್ಯಪಡೆದು ಜ್ಞಾನಾನಂದ ತೃಪ್ತರಾಗಿ ಜಗತ್ಪೂಜ್ಯರೂ, ಜಗತ್ತಿಗೇ ಮಾರ್ಗದರ್ಶಕರೂ ಆಗುವರು. ಆದರೆ ಇಂತಹ ಯೋಗ್ಯತೆಯು ಮನುಷ್ಯಸಾಮಾನ್ಯರಿಗೆ ಬರಲಾರದು; ಯಾಕಂದರೆ, ಸ್ವಭಾವತಃ ಮನುಷ್ಯನಲ್ಲಿ ಇಂದ್ರಿಯ ನಿಗ್ರಹಶಕ್ತಿಯು ಇರುವದಿಲ್ಲ; ಮತ್ತು ದೇವರು ತನಗೆಕೊಟ್ಟಿರುವ ವಿಚಾರಶಕ್ತಿಯ ದುರುಪಯೋಗಮಾಡಿ ಹೆಚ್ಚು ಹೆಚ್ಚು ಸುಖವನ್ನು ಕಲ್ಪಿಸುತ್ತ, ಆ ಸುಖದ ಕಲ್ಪನೆಯ ಬಲಿಗೆ ಬಿದ್ದು, ಹೆಚ್ಚು ಹೆಚ್ಚು ಪರಾವಲಂಬಿಯಾಗುತ್ತ ಹೋಗುವದು ಅವನ ಕೆಟ್ಟ ಚಾಳಿಯಾಗಿರುತ್ತದೆ; ಅಲ್ಲದೆ ಏಕಾಕಿಯಾಗಿರುವದು ಅವನಿಗೆ ಸೇರುವದಿಲ್ಲ; ಆದ್ದರಿಂದ ಆತನು ಮೇಲೆ ಹೇಳಿದಂತೆ ಸುಖದ ಆಶೆಗೆ ಬಿದ್ದು "ಜಾಲಿಯಬಿತ್ತಿ ಕಾಲಿಗೆ ಮೂಲಮಾಡಿಕೊಂಡಂತೆ" ಕುಟುಂಬ, ಸಮಾಜ, ಗ್ರಾಮ, ರಾಷ್ಟ್ರ ಮೊದಲಾದ ಕೃತ್ರಿಮ ಸಂಘಗಳನ್ನು ಮಾಡಿಕೊಂಡು, ಅವುಗಳ ವಿಷಯದ ಮಮಕಾರವಹಿಸಿ ಪರಾವಲಂಬಿಯಾಗಿ ಸುಖದುಃಖದ ಕತ್ತರಿಯ ಬಾಯಿಗೆ ಬೀಳುವನು. ಹೀಗೆ ಮನುಷ್ಯನ ಮಮಕಾರದ ವ್ಯಾಪವು ಹೆಚ್ಚಿದಂತೆ ಅವನ ತಾಪವು ಹೆಚ್ಚುವದು. ಅಂತೇ "ವ್ಯಾಪವಿದ್ದಷ್ಟು ತಾಪಗಳು" ಎಂಬ ಲೋಕೋಕ್ತಿಯು ಪ್ರಸ್ಥಾಪಿತವಾಗಿರುವದು. ಮನುಷ್ಯನು ಸಂಸಾರಮುಕ್ತನಾಗುವವರೆಗೆ ಇಂತಹ ವ್ಯಾಪವು ಹೆಚ್ಚುಕಡಿಮೆ ಪ್ರಮಾಣದಿಂದಲೇ ಆಗಲೊಲ್ಲದೇಕೆ, ಅವನನ್ನು ಬಿಟ್ಟದ್ದಲ್ಲ. ಇದನ್ನರಿತು ಪ್ರಾಚೀನಕಾಲದ ಜ್ಞಾನಿಗಳು ಹಿತದ ಮಿತಾಚರಣೆಯ ತತ್ವದ ಮೇಲೆ ಹಳ್ಳಿಗಳ ರಚನೆಯನ್ನುಮಾಡಿರುವದರಿಂದ, ಆ ರಚನಾಕ್ರಮುವನ್ನು ಕುರಿತು ನಾವು ಆಲೋಚಿಸುವದು ಅವಶ್ಯವಾಗಿರುವದು.

**ನಮ್ಮ ಪ್ರಾಚೀನಕಾಲದ ಹಳ್ಳಿಗಳು**—ನಮ್ಮ ಪ್ರಾಚೀನಕಾಲದ ಹಳ್ಳಿಗಳು ಸ್ವರಾಜ್ಯಗಳೇ ಆಗಿದ್ದವು. ನಾವು ಮೇಲೆಯೊಮ್ಮೆ ಸ್ವರಾಜ್ಯದ ವ್ಯಾಖ್ಯೆಯನ್ನು ಸ್ವಲ್ಪದರಲ್ಲಿ, ಅಂದರೆ "ಆಹಾರ—ವಿಹಾರ—ವ್ಯವಹಾರಗಳ ವಿಷಯದಲ್ಲಿ ಪರವಶವಾಗದಿರುವದೇ ಸ್ವರಾಜ್ಯವು" ಎಂದು ಹೇಳಿರುತ್ತೇವೆ. ಅದರಂತೆ, ನಮ್ಮ ಹಳ್ಳಿಯ ರಹಿವಾಸಿಗಳಿಗೆ ಆಹಾರ–ವಿಹಾರ–ವ್ಯವಹಾರಗಳ ಸಂಬಂಧದ ಪರವಶತೆಯು ಬಾರದಂತೆ ಹಳ್ಳಿಯ ರಚನೆಯು ಆಗಿರುತ್ತದೆ. ಈ ಮೂರುಬಗೆಯ ಗರಜುಗಳನ್ನು ಪೂರಯಿಸಿಕೊಡುವ ಜನರು ಹಳ್ಳಿಗಳಲ್ಲಿ ವಾಸಿಸುವದು ಹಳ್ಳಿಯ ವಸತಿಯ ನಿಯಮವೇ ಆಗಿತ್ತೆಂದು ಹೇಳಬಹುದು. ತಮ್ಮ ತಮ್ಮ ಹಳ್ಳಿಗಳ ವಿಷಯದಲ್ಲಿ ಮಮಕಾರತಾಳಿ, ಪರಸ್ಪರರ ಗರಜುಗಳ ಪೂರಯಿಕೆಯ ಬೇರೆಬೇರೆ ಉದ್ಯೋಗಗಳನ್ನು ಮಾಡುತ್ತ, ಪರಸ್ಪರರ ಹಿತಸಂಬಂಧದ ಬಾಂಧವ್ಯವುಳ್ಳವರಾಗಿ ಹಳ್ಳಿಯಲ್ಲಿ ವಾಸಿಸುವವರಿಗೆ ಹಳ್ಳಿಯ ರಹಿವಾಸಿಗಳೆನ್ನುವರು. ಅವರಲ್ಲಿ—೧ ಅಧಿಕಾರಿಗಳು. ೨ ಉದ್ಯೋಗಸ್ಥರು. ೩ ನೌಕರರು ಎಂಬ ಮೂರು ವರ್ಗಗಳಿರುವವು. ಈ ಮೂರು ವರ್ಗದ ರಹಿವಾಸಿಗಳ ವಿವರಣೆ, ಪರಸ್ಪರ ಸಂಬಂಧ ಇವುಗಳ ದಿಗ್ದರ್ಶನವನ್ನು ಯಥಾಜ್ಞಾನ ಕೆಳಗೆ ಮಾಡಿರುತ್ತದೆ.

**ಹಳ್ಳಿಯ ಅಧಿಕಾರಿಗಳು**—ತಮ್ಮ ನೈತಿಕವರ್ಚಸ್ಸು, ಅಧಿಕಾರಬಲ ಧನಧಾನ್ಯಾದಿಗಳ ಸುಸಂಪನ್ನತೆಯ ಒಗರು ಇವುಗಳ ಯೋಗದಿಂದ ಹಳ್ಳಿಯ ಜನರ ನಡತೆ–ನಡಾವಳಿ, ಆಚಾರ–ವಿಚಾರಗಳ ನಿಯಮನಮಾಡುವವರೇ ಹಳ್ಳಿಯ ಅಧಿಕಾರಿಗಳು. ಈ ಅಧಿಕಾರಿಗಳ ಭಯದಿಂದ ಹಳ್ಳಿಯವರು ಯಾವ ಮಾತಿನಲ್ಲಿಯೂ ಹಾದಿಯಬಿಟ್ಟು ನಡೆಯುವದಿಲ್ಲ. ಗೌಡ, ಕುಲಕರಣಿ, ಸೆಟ್ಟಿ, ಬಣಕಾರ ಇವರು ಪ್ರತಿಒಂದು ಹಳ್ಳಿಯಲ್ಲಿರುವ ಅಧಿಕಾರಿಗಳಾಗಿರುವರು. ಹಲವು ಹಳ್ಳಿಗಳ ಗೌಡಿಕೆಯುಳ್ಳವನನ್ನು ಬಹುತರ ದೇಸಾಯಿಯೆಂತಲೂ, ಹಲವು ಹಳ್ಳಿಗಳ ಕುಲಕರಣಿಕೆಯುಳ್ಳವರನ್ನು ದೇಶಪಾಂಡೆಯೆಂತಲೂ ಸಾಧಾರಣವಾಗಿ ಈ ಪ್ರಾಂತದಲ್ಲಿ ಕರೆಯುವದುಂಟು. ಗೌಡನು ಹಳ್ಳಿಯ ಉತ್ಪಾದಕನಾಗಿದ್ದು, ಹಳ್ಳಿಯ ಆಡಳಿತಕ್ಕೆ ಸಂಬಂಧಪಟ್ಟವನಾದದ್ದರಿಂದ ಅವನು ಹಳ್ಳಿಯ ಅರಸನಸ್ಥಾನದಲ್ಲಿರುವನು. ಈತನು ಹಳ್ಳಿಯ ಯೋಗಕ್ಷೇಮವ ನೋಡುವದಲ್ಲದೆ, ಹಳ್ಳಿಗೆಬಂದ ಪರಸ್ಥರ ಹಾಗು ರಾಜ್ಯಾ

ಧಿಕಾರಿಗಳ ಸರಬರಾಯಿ ಮಾಡಿಸುವ ಜವಾಬುದಾರಿಯನ್ನೂ ಈತನೇ ವಹಿಸ ಬೇಕಾಗುವದು. ಕುಲಕರಣಿ ಅಥವಾ ಶಾನುಭೋಗನು ಗೌಡನ ಆಲೋಚಕನೂ, ಹಳ್ಳಿಯ ಲೆಕ್ಕಪತ್ರ ಬರೆಯುವವನೂ ಆದದ್ದರಿಂದ, ಆತನು ಮಂತ್ರಿಸ್ಥಾನದಲ್ಲಿರುವನು. ಸೆಟ್ಟರು ಊರವ್ಯವಹಾರ ನಿರ್ಣಯಮಾಡುವಲ್ಲಿ ಮುಖ್ಯರು. ಬಣಕಾರರು ಬಣಗಳ ಮುಖ್ಯರು ಆಗಿರುವರು.

**ಹಳ್ಳಿಯ ಉದ್ಯೋಗಸ್ಥರು**—ಹಳ್ಳಿಯ ಜನರ ಆಹಾರ ವಿಹಾರದ ಪದಾರ್ಥಗಳ, ಹಾಗು ಶ್ರಮಬಂಡವಲಗಳ ಪೂರಯಿಕೆ ಮಾಡುವವರು ಹಳ್ಳಿಯ ಉದ್ಯೋಗಸ್ಥರು. ಅವರಲ್ಲಿ— ೧ ಒಕ್ಕಲಿಗರು ಹಳ್ಳಿಯವರಿಗೆ ಆಹಾರಗಳನ್ನು ಒದಗಿಸಿಕೊಡುವರು. ೨ ನೇಕಾರರು ವಸ್ತ್ರಗಳನ್ನು ಪೂರೆಯಿಸುವರು. ೩ ಸಾವುಕಾರರು ಹಳ್ಳಿಯವರಿಗೆ ಬಂಡವಲ ಒದಗಿಸಿಕೊಡುವರು. ೪ ಅಂಗಡಿಕಾರರು ಸಂಸಾರೋಪಯೋಗಿ ವಿವಿಧವಸ್ತುಗಳನ್ನು ಒದಗಿಸಿಕೊಡುವರು. ೫ ಕಲಾಕುಶಲರು ವಿಹಾರದ ವಿವಿಧ ಮನೋರಂಜಕ ಒಡವೆಗಳನ್ನು ಉತ್ಪನ್ನ ಮಾಡುವರು. ೬ ಕೂಲಿಕಾರರು ಶ್ರಮದಪೂರೆಯಿಕೆಮಾಡಿಕೊಡುವರು. ೭ ಕಲಿಸುವವರು ಹಳ್ಳಿಯ ಹುಡುಗರಿಗೆ ಓದು ಬರಹ ಕಲಿಸುವರು. ೮ ವೈದ್ಯರು ಔಷಧಕೊಡುವರು. ೯ ಜಟ್ಟಿಗಳು ಶರೀರಬಲ ಹೆಚ್ಚಿಸುವರು. ೧೦ ಗುರಿಕಾರರು ಯುದ್ಧಕಲೆಕಲಿಸುವರು. ಉಳಿದ ಉದ್ಯೋಗಸ್ಥರ ಮಕ್ಕಳು ತಮ್ಮ ತಮ್ಮ ಉದ್ಯೋಗಗಳನ್ನು ಚಿಕ್ಕಂದಿನಿಂದಲೇ ತಮ್ಮ ತಮ್ಮ ಮನೆಯಲ್ಲಿ ಕಲಿಯುತ್ತಿದ್ದರು. ಈ ಎಲ್ಲ ಉದ್ಯೋಗಸ್ಥರಲ್ಲದೆ ಹಳ್ಳಿಯವರ ಆಶ್ರಯದಿಂದ ಸುಖವಾಗಿ ಜೀವಿಸುವಸುಖವಸ್ತುಗಳು ಎಂಬ ಜನರು ಊರಲ್ಲಿ ಇರುತ್ತಿದ್ದರು. ಹಳ್ಳಿ ದೊಡ್ಡದಾಗುತ್ತ ಪಟ್ಟಣದ ಸ್ವರೂಪವನ್ನು ಹೊಂದಿದಂತೆ, ಈ ಉದ್ಯೋಗಸ್ಥರ ಪ್ರಭೇದವೂ, ಸಂಖ್ಯೆಯೂ, ನೈಪುಣ್ಯವೂ ಹೆಚ್ಚುವವು, ಹಳ್ಳಿಗಳು ಸಣ್ಣವಾದರೆ ಅವು ಕಡಿಮೆಯಾಗುವವು.

**ಹಳ್ಳಿಯ ನೌಕರರು**—ಗೌಡ–ಕುಲಕರಣಿಯರು ಹಳ್ಳಿಯ ಅಧಿಕಾರಸ್ಥರಾಗಿದ್ದರೂ ಅವರು ಒಂದು ಬಗೆಯಿಂದ ಊರ ಚಾಕರಿಯನ್ನು ಮಾಡುತ್ತಿರುವದರಿಂದ ಅವರನ್ನು ಊರ ನೌಕರರಲ್ಲಿ ಎಣಿಸಲಾಗುವದು. ಊರ ಈ ನೌಕರರ ಸಂಖ್ಯೆಯು ಸಾಧಾರಣವಾಗಿ ಹನ್ನೆರಡು ಇರುವದರಿಂದ, ಇವರ

ಸಂಘಕ್ಕೆ ಬಾರಾಬಲೋತಿಯೆನ್ನುವರು. ಇವರಲ್ಲಿ ಗೌಡಕುಲಕರಣಿಯರ ಕರ್ತವ್ಯದ ದಿಗ್ದರ್ಶನವನ್ನು ಮೇಲೆ ಮಾಡಿರುತ್ತದೆ. ಅವರಿಬ್ಬರಲ್ಲದೆ ೩ ತಳ ವಾರನು ಕಳ್ಳರುಕಾಕರ ಹಾವಳಿಯಾಗದಂತೆ ಹಳ್ಳಿಯಲ್ಲಿ ಬಂದೋಬಸ್ತು ಇಟ್ಟು, ಗೌಡಕುಲಕರಣಿಯರ ಕಾರ್ಯಕ್ಕೆ ಸಹಾಯಮಾಡುವದರಿಂದ ಈತನು ಸೇನಾಪತಿಯಸ್ಥಾನದಲ್ಲಿರುವನು. ಓಲೆಕಾರರು ಈತನಿಗೆ ಸಹಾ ಯಕರಾಗಿರುವರು. ೪ ಬಡಿಗ—ಈತನು ಒಕ್ಕಲಿಗರಿಗೂ, ಉಳಿದ ಹಳ್ಳಿಯ ರಹಿವಾಸಿಗಳಿಗೂ ಕಟ್ಟಿಗೆಯ ಸಾಮಾನುಗಳನ್ನು ಮಾಡಿಕೊಡುವನು. ೫ಕಮ್ಮಾರ–ಈತನುಹಳ್ಳಿಯವರಿಗೆ ಕಬ್ಬಿಣದಸಾಮಾನು ಮಾಡಿಕೊಡುವನು. ೬ ನಾವಲಿಗ–ಈತನು ಊರವರಕ್ಷೌರಮಾಡುವನು. ೭ ಪತ್ತಾರ ಈತನು ಬೇರೆ ಬೇರೆನಾಣ್ಯಗಳ ಪರೀಕ್ಷೆಮಾಡಿ ಬೆಲೆಗೊತ್ತುಪಡಿಸಲಿಕ್ಕೆ ಗೌಡನಿಗೆ ಸಹಾಯ ಮಾಡುವನು. ೮ ಜೋಯಿಸ–ಈತನು ಹಳ್ಳಿಯವರಿಗೆ ಮುಹೂರ್ತ ಮೊದ ಲಾದವನ್ನು ಹೇಳುತ್ತ, ಹಳ್ಳಿಯವರ ಲಗ್ನಮೊದಲಾದ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುವನು. ೯ ಮಠಸ್ಥರೂ, ಮುಲ್ಲಾಗಳೂ—ಇವರು ತಮ್ಮ ತಮ್ಮ ಜಾತಿಯವರ ಧಾರ್ಮಿಕಕಾರ್ಯಗಳನ್ನು ಮಾಡಿಸುವರು. ೧೦ ಬಾರಿಕಿ—ಈತನು ಗೌಡನ ಅಪ್ಪಣೆಯಂತೆ ಹಳ್ಳಿಯಲ್ಲಿ ಮುಸರೆತಿಕ್ಕು ವದು, ಹಿಲಾಲು ಹಿಡಿಯುವದು ಮುಂತಾದ ಕೆಲಸಮಾಡುವನು. ೧೧ ಹೂಗಾರ—ಈತನು ಸಾರ್ವಜನಿಕ ಗುಡಿಗಳಿಗೂ, ಊರವರಿಗೂ ಹೂಪ ತ್ರಿಗಳನ್ನು ಒದಗಿಸಿಕೊಡುವನು. ೧೨ ಹೊಲಿಯ—ಈತನು ಊರ ಸ್ವಚ್ಛತೆ ಕಾಯ್ದು ಸತ್ತದನಗಳ ವ್ಯವಸ್ಥೆಮಾಡುವನು. ಇವರಲ್ಲದೆ ಕುಂಬಾರ, ಅಗಸ, ಬಜಂತ್ರಿ ಮೊದಲಾದ ಊರ ನೌಕರರು ಇರುವರು. ಇವರೆಲ್ಲರೂ ಊರ ಕಾಯಂರಹಿವಾಸಿಗಳಾಗಿರುವವಕ್ಕಾಗಿ ಇವರು ಮಾಡುವ ಊರ ಚಾಕರಿಗೆ ಪ್ರಾಚೀನಕಾಲದ ಅರಸರು ಹೊಲಗಳನ್ನು ಹಾಕಿಕೊಟ್ಟಿರುವದರಿಂದ, ಇವರು ಊರ ಕಾಯಂ ಬಾಬದಾರರಾಗಿರುವರು.

**ಹಳ್ಳಿಯ ರಹಿವಾಸಿಗಳ ಪರಸ್ಪರ ಹಿತಸಂಬಂಧ**—ಊರ ರಹಿ ವಾಸಿಗಳಲ್ಲಿಯ ಅಧಿಕಾರಿವರ್ಗದವರಿಗೆ ಊರ ಉದ್ಯೋಗಸ್ಥರ, ಹಾಗು ಊರ ನೌಕರರ ಅವಶ್ಯವೂ, ಊರ ಉದ್ಯೋಗಸ್ಥರಿಗೆ ಊರ ಅಧಿಕಾರಸ್ಥರ ಹಾಗು ಊರ ನೌಕರರ ಅವಶ್ಯವೂ, ಊರ ನೌಕರರಿಗೆ ಊರ ಅಧಿಕಾರಸ್ಥರ

ಹಾಗು ಊರಉದ್ಯೋಗಸ್ಥರ ಅವಶ್ಯವೂ ಇರುವದರಿಂದ, ಲಿಂಗಕ್ಕೂ ವಸ್ತ್ರಕ್ಕೂ ಗಂಟು ಇರುವಂತೆ ಆ ಪರಸ್ಪರರಲ್ಲಿ ದೃಢಸಂಬಂಧವು ಉಂಟಾಗಿರುತ್ತದೆ. ಒಬ್ಬರನ್ನೊಬ್ಬರು ತಿರಸ್ಕರಿಸಿ ಬಿಟ್ಟುಕೊಡಲಿಕ್ಕೆ ಅವರಿಗೆ ಬರುವದಿಲ್ಲ. ಊರ ನೌಕರರು ಊರವರ ಒಂದೊಂದುಬಗೆಯ ಚಾಕರಿಯನ್ನುಮಾಡುವರು. ಅವರ ಆ ಚಾಕರಿಗಾಗಿ ಊರವರು ಅವರಿಗೆ ಆಯವನ್ನು, ಅಂದರೆ ಲೆಕ್ಕದಂತೆ ಗೊತ್ತಾದ ಕಾಳನ್ನು ಕೊಡುವರು. ಆಯಕೊಡದ ಸುಖವಸ್ತುಗಳು ದುಡ್ಡು ಕೊಡುವರು. ಹಳ್ಳಿಯವರು ತಮ್ಮ ಊರ ನೌಕರರಿಂದ, ಅಂದರೆ ಬಾಬುದಾರರಿಂದಅಲ್ಲದೆ ಎರಡನೆಯ ಹಳ್ಳಿಯವರಿಂದ ಕೆಲಸಮಾಡಿಸಿಕೊಳ್ಳುವದು ಹಳ್ಳಿಗೆ ಅಪಮಾನಕಾರಕವಾದದ್ದರಿಂದ, ತಮ್ಮ ಹಳ್ಳಿಯವರ ಸುಸ್ಥಿತಿಯನ್ನು ಕಾಯ್ದುಕೊಳ್ಳಲಿಕ್ಕೆ ಅಭಿಮಾನಪಡುವರು. ಈ ಕೆಲಸಗಾರರ ಮನೆತನಗಳು, ಊರಲ್ಲಿಯ ಮನೆತನಗಳನ್ನು ತಮ್ಮ ಒಕ್ಕಲೆಂದು ತಮ್ಮೊಳಗೆ ಹಂಚಿಕೊಂಡು, ತಮ್ಮ ತಮ್ಮ ಒಕ್ಕಲುಗಳ ಕೆಲಸಗಳನ್ನು ತಾವೇ ಜಾಗರೂಕತೆಯಿಂದ ಮಾಡುವರು. ಅನ್ಯರನ್ನು ಕೆಲಸಕ್ಕೆ ಕರೆಯುವದೂ, ಕರೆಯುವ ಪ್ರಸಂಗ ತರುವದೂ ಕ್ರಮವಾಗಿ ಒಕ್ಕಲಿಗೂ ನೌಕರರಿಗೂ ಅಪಮಾನಾಸ್ಪದವಾದದ್ದರಿಂದ, ಕರ್ತವ್ಯದಕ್ಷತೆಯೂ, ಮಮಕಾರದ ದೃಢಸಂಬಂಧವೂ ಇಬ್ಬರಲ್ಲಿಯೂ ಕಂಡುಬರುವವು. ಇದರಿಂದ ಇಬ್ಬರ ಹಿತಸಂಬಂಧವೂ ದೃಢವಾಗಿ, ಪರಸ್ಪರರು ಒಂದು ಮನೆತನದವರಂತೆ ನಡೆದುಕೊಳ್ಳುವರು. ಇಂಥ ಕರ್ತವ್ಯನಿಷ್ಠರ ಕಣ್ಣಿಗೆ ಅವರವರ ಕರ್ತವ್ಯಗಳು ಕಟ್ಟಿರುತ್ತಿದ್ದವಲ್ಲದೆ, ಜಾತಿಭೇದದ ವೈಷಮ್ಯವಾಗಲಿ, ಮತಾದಿಗಳ ದುರಭಿಮಾನವಾಗಲಿ ಕಣ್ಣೆದುರಿಗೆ ಬರುತ್ತಿದ್ದಿಲ್ಲ. ಅವರವರ ಜಾತಿ ಅವರವರಿಗೆ, ಅವರವರ ಆಚಾರ ಅವರವರಿಗೆ, ಅವರವರ ಶೀಲ ಅವರವರಿಗೆ, ಅವರವರ ಧರ್ಮ ಅವರವರಿಗೆ ಹೆಚ್ಚು ಎಂಬಸದ್ಭಾವನೆಯು ಎಲ್ಲರಲ್ಲಿಯೂ ಇರುತ್ತಿತ್ತು. ಅವರು ಸಂಬಂಧಗಳ ಶ್ರೇಷ್ಠ–ಕನಿಷ್ಠತಾರತಮ್ಯವನ್ನು ಪ್ರಾಂಜಲಮನಸ್ಸಿನಿಂದ ಒಪ್ಪಿಕೊಂಡು, ಪರಸ್ಪರ ನಯಭಯಭಕ್ತಿಯಿಂದ ನಡೆದುಕೊಳ್ಳುತ್ತಿದ್ದರಲ್ಲದೆ, ಯಾರದೇನೆಂಬ ಎಟ್ಟತನವನ್ನು ತೋರಿಸುತ್ತಿದ್ದಿಲ್ಲ. ಕರ್ತವ್ಯಚ್ಯುತಿಯೊಂದೇ ಅವರ ಹೀನತನಕ್ಕೆ ಕಾರಣವಾಗಿರುತ್ತಿತ್ತು; ಆದ್ದರಿಂದ ಸ್ವಾಚಾರರತರಾದ ಅವರಿಗೆ ವರ್ಣಸಂಕರ, ಜಾತಿಸಂಕರ, ಧರ್ಮಾಂತರ ಇವನ್ನು ಮಾಡುವ ಪ್ರಸಂಗಗಳು ಬಹುತರ ಬರುತ್ತಿದ್ದಿಲ್ಲ.

**ಹಳ್ಳಿಯ ನ್ಯಾಯವಿಚಾರ**—ಇವನ್ನು ಹಳ್ಳಿಯ ದೈವದವರು ಮಾಡುತ್ತಿದ್ದರು. ದೈವದವರಲ್ಲಿ ಗೌಡ, ಕುಲಕರಣಿ, ಸೆಟ್ಟಿ, ಬಣಕಾರ, ತಳವಾರ ಇವರು ಇದ್ದೇ ಇರುತ್ತಿದ್ದರು. ಪ್ರಸಂಗದಲ್ಲಿ ಹೊಲೆಯನು ಕೂಡ ದೈವದಲ್ಲಿ ಇರುತ್ತಿದ್ದನು. ನ್ಯಾಯವಿಚಾರಣೆಯ ಸಂಬಂಧದಿಂದ ತಮ್ಮ ಸ್ಪಷ್ಟಮತಕೊಡುವ ಅಧಿಕಾರವು ಎಲ್ಲ ದೈವದವರಿಗೂ ಇರುತ್ತಿತ್ತು. ಹೊಲಿಯನುಕೂಡ ತನ್ನ ಸ್ಥಳದಲ್ಲಿ ಕುಳಿತು ಸಂಕೋಚವಿಲ್ಲದೆ ನಿರ್ಭಿಡೆಯಿಂದ ತನ್ನ ಮತವನ್ನು ವ್ಯಕ್ತಮಾಡುತ್ತಿದ್ದನು. ಊರ ನ್ಯಾಯಾನ್ಯಾಯದ ಸುದ್ದಿ ಊರಲ್ಲ ಮುಚ್ಚದಿರುವದರಿಂದ, ದೈವದ ನ್ಯಾಯನಿರ್ಣಯದಲ್ಲಿ ಅನ್ಯಾಯವಾಗುತ್ತಿದ್ದಿಲ್ಲ. ದೈವದ ನಿರ್ಣಯಕೇಳದವನು ದೈವದವರಿಗೆ, ಅರ್ಥಾತ್ ಊರಿಗೆ ಬೇಡಾಗಿ ಬಹಿಷ್ಕೃತನಾಗುತ್ತಿದ್ದದ್ದರಿಂದ, ಊರ ಜಗಳ ಊರಬಿಟ್ಟು ಹೊರಗೆ ಹೋಗದೆ, ಕೋರ್ಟುಗಳಿಗೆ ಎಡತಾಕುವ ತ್ರಾಸವೂ, ಮನೆಹಾಳು ಮಾಡಿಕೊಳ್ಳುವ ಪ್ರಸಂಗವೂ ಹಳ್ಳಿಯ ರಹಿವಾಸಿಗಳಿಗೆ ಬರುತ್ತಿದ್ದಿಲ್ಲ. ಅಪರಾಧಿಗಳಿಗೆ ಕಟ್ಟಿದ ದಂಡದಹಣವು ಅವನ ಜಾತಿಯ ಹಿತಕ್ಕೆ, ಅಥವಾ ಊರ ಹಿತಕ್ಕೆ, ಅಥವಾ ದೇವಸ್ಥಾನದ ವಿನಿಯೋಗಕ್ಕೆ ವೆಚ್ಚವಾಗುತ್ತಿದ್ದದ್ದರಿಂದ, ಲಂಚಕ್ಕೆ ಆಸ್ಪದವಿಲ್ಲದೆ ಹೋಗಿ ನಿಸ್ಪೃಹದ ನ್ಯಾಯವು ದೊರೆಯುತ್ತಿತ್ತು. ಊರತನದ ದೊಡ್ಡ ದೊಡ್ಡ ಕೆಲಸಗಳು ಊರ ದೈವದವರಿಂದಲೇ ಜರಗುತ್ತಿದ್ದವು. ಆಯಾಜಾತಿಯವರ ಧಾರ್ಮಿಕತೊಡಕುಗಳನ್ನು ಆಯಾಜಾತಿಯ ಮತಸ್ಥರು ತಮ್ಮ ಜಾತಿ ದೈವದವರ ಸಹಾಯದಿಂದ ಬಗೆಹರಿಸುತ್ತಿದ್ದರು.

**ಸ್ವರಾಜ್ಯದಲ್ಲಿ ಅಂಥಮತ್ತೇನು ಹೆಚ್ಚಿನದಿರುವದು ?**—ಮೇಲಿನ ಹಳ್ಳಿಯ ವ್ಯವಸ್ಥೆಯನ್ನು ಓದುವ ಮರ್ಮಜ್ಞನಿಗೆ ಹಳ್ಳಿಯ ಸಾತ್ವಿಕಸ್ವರಾಜ್ಯದ ಸ್ವರೂಪವು ಗೊತ್ತಾಗದೆ ಇರಲಿಕ್ಕಿಲ್ಲ. ಹಳ್ಳಿಯವರು ತಮ್ಮ ಹಳ್ಳಿಯ ಯಾವತ್ತು ಗರಜುಗಳನ್ನು ತಾವೇ ಪೂರ್ಣಮಾಡಿಕೊಂಡು, ತಮ್ಮ ಸಂರಕ್ಷಣವನ್ನು ತಾವೇ ಮಾಡಿಕೊಳ್ಳುತ್ತಾ, ತಮ್ಮ ಜಗಳ ತೋಟಿಗಳನ್ನು ತಾವೇ ತೀರಿಸಿಕೊಳ್ಳುತ್ತಾ, ನಾಗರಿಕರ ಹೆಚ್ಚಿನ ಆಡಂಬರಕ್ಕೆ ಹೋಗದೆ, ಇಲ್ಲದ ಬಿಳಿಛಾಯಕ್ಕೆ ಬೀಳದೆ ಉದ್ಯೋಗತತ್ಪರರೂ, ಪ್ರಾಮಾಣಿಕರೂ, ಮಿತವ್ಯಯಿಗಳೂ ಸ್ವಾವಲಂಬಿಗಳೂ, ಸ್ವಾಭಿಮಾನಿಗಳೂ, ನಿಶ್ಚಿಂತರೂ ಆಗಿ ಸ್ವರಾಜ್ಯ ಸುಖವನ್ನು ಭೋಗಿಸುತ್ತಿದ್ದರು. ಇಂತಹ ಸ್ವರಾಜ್ಯವುಳ್ಳ ಹಳ್ಳಿಯ ಮನೆ

ಗಳಿಗೆ ಕೀಲಿಗಳು ಬೇಕಾಗುತ್ತಿದ್ದಿಲ್ಲವೆಂದು ಮುಂತಾಗಿ ಮೆಗಾಸ್ಥಿನೀಸನಂಥ ಪರದೇಶದ ಪ್ರವಾಸಿಯು ವರ್ಣಿಸಿದ್ದನ್ನು ಮನಸ್ಸಿನಲ್ಲಿ ತಂದರೆ, ಸ್ವರಾಜ್ಯದಲ್ಲಿ ಮತ್ತೇನು ಅಂಥ ಹೆಚ್ಚಿನದದೆ ಎಂಬ ವಿಚಾರವು ಮನಸ್ಸಿನಲ್ಲಿ ಬರುವಹಾಗಿದೆ. ಸ್ವರಾಜ್ಯವೆಂದರೆ, ವ್ಯಕ್ತಿಯಾಗಲಿ, ಕುಟುಂಬವಾಗಲಿ, ಹಳ್ಳಿಯಾಗಲಿ, ರಾಜ್ಯವೇ ಆಗಲಿ ತನ್ನ ಭಾರವನ್ನು ಮಂದಿಯಮೇಲೆ ಹಾಕದೆ, ತನ್ನ ಸಂರಕ್ಷಣವನ್ನು ತಾನೇ ಮಾಡಿಕೊಳ್ಳುತ್ತಾ, ತನ್ನ ಗರಜುಗಳನ್ನು ತಾನೇ ಪೂರ್ಣಮಾಡಿಕೊಂಡು, ತನ್ನ ಜಗಳತ್ರೋಟೆಗಳನ್ನು ತಾನೇ ತೀರಿಸಿಕೊಳ್ಳುತ್ತ, ಅರ್ಥಾತ್ ಒಂದೇ ಮಾತಿನಲ್ಲಿ ಹೇಳುವದಾದರೆ ತಾನು ಎರಡನೆಯವರ ಆಳಿಕೆಗೆ ಒಳಗಾಗದೆ ತನ್ನನ್ನು ತಾನೇ ಆಳಿಕೊಳ್ಳುವದು! ಇಂಥ ಸ್ವರಾಜ್ಯವನ್ನು ವ್ಯಕ್ತಿಯಾಗಲಿ, ಕುಟುಂಬವಾಗಲಿ, ರಾಜ್ಯವಾಗಲಿ ತನ್ನ ಸಾಮರ್ಥ್ಯ–ತಿದ್ದುಪಡೆ–ಒಕ್ಕಟ್ಟು-ಸಹಕಾರಿತೆಗಳಿಂದ ತಾನೇ ಸಂಪಾದಿಸಬೇಕಾಗುತ್ತದಲ್ಲದೆ, ಮಂದಿಯು ಅದನ್ನು ಕೊಡಲಾರರು. ಒಂದು ಪಕ್ಷದಲ್ಲಿ ಬಿಕ್ಕೆಯಿಂದ, ಅಥವಾ ಹಟಮಾರಿತನದಿಂದ ಅದನ್ನು ಸಂಪಾದಿಸಿದೆನೆಂದು ತಿಳಿದರೂ, ಆ ಎರವಿನ ಸ್ವರಾಜ್ಯವು ನಿಜವಾದ ಸ್ವರಾಜ್ಯವೆನಿಸದು; ಯಾಕಂದರೆ ಅಧಿಕಾರಸಂಪನ್ನತೆಪಡೆದ ಹೊರತು ಆ ಸ್ವರಾಜ್ಯವು ಮಂದಿ ಕೊಟ್ಟದ್ದಾದ್ದರಿಂದ ದಕ್ಕಲಾರದು.

**ಕೆಟ್ಟು ಪಟ್ಟಣಸೇರು**—ಯಾವದೊಂದು ಹಳ್ಳಿಯು ಮೇಲೆ ವರ್ಣಿಸಿರುವ ತನ್ನ ಉತ್ತಮ ಸ್ಥಿತಿಯನ್ನು ಕಳೆದುಕೊಂಡರೆ ಅದು ಸ್ವರಾಜ್ಯಭ್ರಷ್ಟವಾಯಿತೆಂದು, ಅಥವಾ ಕೆಟ್ಟಿತೆಂದು ತಿಳಿಯಬೇಕು. ಅಂಥ ಸ್ವರಾಜ್ಯಭ್ರಷ್ಟರು ಪಟ್ಟಣಿಗರ ಒತ್ತಾಸೆಯಿಂದ ಜೀವಿಸುವದಕ್ಕಾಗಿ ಸ್ಥಾನಭ್ರಷ್ಟರಾಗಿ ಪಟ್ಟಣವನ್ನು ಸೇರಬೇಕಾಗುವದು. ಆ ಸ್ವರಾಜ್ಯಭ್ರಷ್ಟ ಹಳ್ಳಿಗಳ ಲಕ್ಷಣಗಳು ಹೀಗೆ ಇರುವವು—ಅವರಲ್ಲಿ ವಿಷಯಾಸಕ್ತಿ ಹೆಚ್ಚುವದು; ಧರ್ಮಲೋಪವಾಗುವದು; ಸ್ವೇಚ್ಛಾಚಾರವು ಬೆಳೆಯುವದು; ಒಬ್ಬರ ಹಂಗು ಒಬ್ಬರಿಗೆ–ಒಬ್ಬರ ಸಂಬಂಧ ಒಬ್ಬರಿಗೆ ಉಳಿಯುವದಿಲ್ಲ; ಎಲ್ಲರೂ ತಮ್ಮ ತಮ್ಮಷ್ಟಕ್ಕೆ ತಾವುಸ್ವತಂತ್ರರೆಂದು ತಿಳಿಯುವರು; ಯಾರದೇನು ಪ್ರತಿಷ್ಠೆ ಎಂಬ ಎಟ್ಟತನವು ಅವರಲ್ಲಿ ಸೇರುವದು; ಪ್ರತಿಒಂದು ಜಾತಿ ಸಮಾಜದವರೂ ಧರ್ಮಕಾರ್ಯಾದಿಗಳ ಗರಜುಗಳನ್ನೂ ಪೂರಯಿಸುವವರು ತಮ್ಮ ಜಾತಿಯವರೇ

ಆಗಬೇಕೆಂದು ಯತ್ನಿಸಿ, ಎರಡನೆಯ ಜಾತಿಸಮಾಜದ ಹಂಗುಉಳಿಯದಂತೆ ಪರಸ್ಪರರ ಪ್ರೇಮಬಂಧನವನ್ನು ಹರಿಯುವರು; ಅವರ ದುಂದುಗಾರಿಕೆ ಹೆಚ್ಚಿ ಸವಿಯೂಟ-ಝೋಕಿನ ಅರಿವೆ ಅಂಚಡಿಗಳ ಕಾಲಲ್ಲಿ ಅವರು ಬಡವರಾಗುವರು; ಅವರು ನಿರುದ್ಯೋಗಿಗಳಾಗುವದರಿಂದ ಅವರ ಉದ್ಯೋಗಗಳನ್ನೆಲ್ಲ ಮಂದಿ ಸೆಳಕೊಳ್ಳುವರು. ಅವರ ಎಲ್ಲ ಸಂಸಾರೋಪಯೋಗಿ ಸಾಮಾನುಗಳ ಪೂರಯಿಕೆಯ ಗುತ್ತಿಗೆಯನ್ನು ಪರಸ್ಥರು ಹಿಡಿಯುವರು. ಹಚ್ಚುವದೀಪ ಪರಸ್ಥರದು, ಕುಟ್ಟುವ ಒನಿಕೆ ಪರಸ್ಥರದು, ಬೀಸುವ ಬೀಸುವಕಲ್ಲು ಪರಸ್ಥರದು, ಹೊಡೆಯುವ ರೆಂಟೆ-ಕುಂಟೆಗಳು ಪರಸ್ಥರವು, ಹತ್ತುವಬಂಡಿ ಪರಸ್ಥರವು, ಕಟ್ಟುವಮನೆಯ ಮುಟ್ಟುಗಳು ಪರಸ್ಥರವು. ಬಹಳವೇನು? ಮನೆಯಅಂಗಳದ ಸ್ವಚ್ಛತೆಗಾಗಿಯೂ ಅವರು ಪರತಂತ್ರರಾಗಬೇಕಾಗುವದು. ಹೀಗೆ ಯಾವತ್ತು ಉದ್ಯೋಗಗಳು ಪರಸ್ಥರ ಕೈಸೇರಿ, ಆ ಕೆಟ್ಟ ಹಳ್ಳಿಯವರಿಗೆ ಕೆಲಸಬೊಗಸೆಗಳೇನು ಉಳಿಯದಿರಲು, ಹಾಳು ಉಸಾಬರಿಗೆ ಬಿದ್ದು, ಜಗಳತೋಟೆಗಳಿಗಾಗಿ ಕೋರ್ಟುಕಚೇರಿ ತಿರುಗಿ ಮನೆಹಾಳುಮಾಡಿಕೊಳ್ಳುತ್ತಾ, ತಮಗೆ ಸಂಬಂಧವಿಲ್ಲದ ದೇಶಾಂತರದ ಹಾಳು ಸುದ್ದಿಗಳನ್ನು ಓದಿ ಕಿಡಿಗೇಡಿಗಳಾಗುತ್ತಾ, ಆ ಕೆಟ್ಟ ಹಳ್ಳಿಯವರು ಯಾವಕೆಲಸಕ್ಕೂ ಬಾರದವರಾಗುವರು. ಕೆಟ್ಟ ಹಳ್ಳಿಯ ದೇಸಾಯಿ ದೇಶಪಾಂಡೆ ಮೊದಲಾದ ವತನದಾರರು ಊರಕಲ್ಯಾಣದ ತಮ್ಮ ಕರ್ತವ್ಯವನ್ನು ಮರೆತು, ಹಳ್ಳಿಯ ತಮ್ಮ ಉತ್ಪನ್ನವನ್ನು ತಕ್ಕೊಂಡು ಹಳ್ಳಿಯ ತಮ್ಮ ವಾಡೆಯನ್ನು (ದೊಡ್ಡಮನೆಯನ್ನು) ಹಾಳುಗೆಡವಿ ಪಟ್ಟಣದಲ್ಲಿ ಬಂಗಲೆಕಟ್ಟಿಸಿ ಕೃತಘ್ನತೆಯಿಂದ ಚಕ್ಕಂದವಾಡುವವರು. ಈ ಕೆಟ್ಟಹಳ್ಳಿಯ ಗುಣಿಜನರೂ, ಬುದ್ಧಿಶಾಲಿಗಳೂ ತಮ್ಮ ಹಳ್ಳಿಗೆ ತಮ್ಮಗುಣದ ಹಾಗು ಕಸಬಿನ ಉಪಯೋಗಮಾಡಿಕೊಡದೆ ಪಟ್ಟಣವನ್ನುಸೇರಿ ದುಡ್ಡುಗಳಿಸಿ, ತಮ್ಮ ಹಳ್ಳಿಯ ಪರಿವೆಯಿಲ್ಲದೆ ಉಂಡುಟ್ಟು ಮೆರೆಯುವರು; ಆದ್ದರಿಂದ ಆ ಕೆಟ್ಟ ಹಳ್ಳಿಯಲ್ಲಿ ಬೀಕಲಾದ ಜನರು ಉಳಿದು "ಕುಗ್ರಾಮಕೋಂಪಿ" ಎಂಬ ತಿರಸ್ಕಾರಕ್ಕೆ ಆ ಹಳ್ಳಿಯು ಗುರಿಯಾಗುವದು, ಅಂದಬಳಿಕ ನಾರದರು ಧರ್ಮರಾಜನನ್ನು ಕೇಳಿದ ಹಳ್ಳಿಯಉತ್ಕರ್ಷದ ಚಂದವು ಇದೇ ಏನು? ಇಂಥ ಕೆಟ್ಟ ಹಳ್ಳಿಗಳೇ, ಅಂದರೆ ಸ್ವರಾಜ್ಯಭ್ರಷ್ಟ ಹಳ್ಳಿಗಳೇ ನಗರದ ಸ್ವರೂಪವನ್ನು ಹೊಂದಬಹುದಲ್ಲವೆ?

**ಕೆಟ್ಟಿದ್ದನ್ನು ಅಟ್ಟುವನೇ ಜಾಣ**—ಈವರೆಗೆ ನಾವು ನಮ್ಮ ಪ್ರಾಚೀನಕಾಲದ ಹಳ್ಳಿಗಳ ಸಾತ್ವಿಕಸ್ವರಾಜ್ಯದ ಸ್ಥಿತಿಯ ದಿಗ್ದರ್ಶನವನ್ನು ನಮಗೆ ಗೊತ್ತಿದ್ದಮಟ್ಟಿಗೆ ಸ್ವಲ್ಪದರಲ್ಲಿ ಮಾಡಿರುತ್ತೇವೆ; ಅದರಂತೆ ಈಗಿನ ಸ್ವರಾಜ್ಯಭ್ರಷ್ಟವಾದ ಕೆಟ್ಟ ಹಳ್ಳಿಗಳ ಸ್ಥಿತಿಯನ್ನೂ ನೆನಪಾದಮಟ್ಟಿಗೆ ಸ್ವಲ್ಪದರಲ್ಲಿ ಹೇಳಿರುತ್ತೇವೆ. ಇವೆರಡನ್ನೂ ಮರ್ಮವರಿತು ಅವಲೋಕಿಸಿ, ದೇಶಕ್ಕೆ ಸ್ವರಾಜ್ಯ ಒದಗಿಸಿಕೊಡಬೇಕೆಂದು ಅಟ್ಟಹಾಸಮಾಡುವ ದೇಶಮುಖಂಡರು, ವ್ಯಕ್ತಿ–ಕುಟುಂಬಗಳ ಸ್ವರಾಜ್ಯದ್ವಾರಾ ಮೊದಲು ಹಳ್ಳಿಗಳಿಗೆ ದೇಶ–ಕಾಲ–ಪರಿಸ್ಥಿತಿಗಳಿಗನುಸರಿಸಿ ಸ್ವರಾಜ್ಯವನ್ನು ಒದಗಿಸಿಕೊಡಬೇಕು; ಹಾಗೆಮಾಡದೆ ಮುಗಿಲನ್ನು ತೆಕ್ಕೆಹಾದಂತೆ, ಅಥವಾ ಗುಡ್ಡಕ್ಕೆ ಹಗ್ಗಹಾಕಿದಂತೆ, ಅಥವಾ ನೇವಿಗೆ ಹಾರದಬೆಕ್ಕು ಸ್ವರ್ಗಕ್ಕೆ ಹಾರಿತೆಂಬಂತೆ ಒಮ್ಮೆಲೆ ದೇಶಕ್ಕೆ ಸ್ವರಾಜ್ಯ ಒದಗಿಸಿಕೊಡಬೇಕೆಂಬ ನೀಗದ ಅಸಂಗತವಿಚಾರವನ್ನು ಮನಸ್ಸಿನಲ್ಲಿತಂದು, ಪರದೇಶದಸ್ಥಿತಿಯ ಕಲ್ಪನೆಯಿಂದ ಅಸ್ಪೃಶ್ಯತಾನಿವಾರಣ, ಜಾತಿಸಂಕರ, ಸತ್ಯಾಗ್ರಹ, ಅಸಹಕಾರ, ಸಹಭೋಜನ, ಸಿಂದಿಗಿಡಗಳ ಧ್ವಂಸ, ಪ್ರಭಾತಫೇರಿ ಮುಂತಾದ ಒಂದಲ್ಲ ಎರಡಲ್ಲ ಸ್ವರಾಜ್ಯಘಾತಕ ಹಲವು ಸಂಗತಿಗಳನ್ನು ಬಳಿಕೆಯಲ್ಲಿತರಲು ಹೆಣಗಿ, ದೇಶದಲ್ಲಿ ಅಸಂತುಷ್ಟತೆ ಹೆಚ್ಚಿಸಿ, ಜನರನ್ನು ಮತ್ತಿಷ್ಟು ಅತಂತ್ರರನ್ನು ಮಾಡುವಗೊಡವಿಗೆ ಹೋಗಬಾರದು. ✕✕ಯಮೇಲೆ ಒದ್ದರೆ ಬಾಯಿಯಲ್ಲಿಯಹಲ್ಲು ಬಿದ್ದವೆನ್ನುವಂತೆ, ಸ್ವರಾಜ್ಯಘಟನೆಗೆ ಈ ವಿಘಾತಕಸಂಗತಿಗಳ ಸಂಬಂಧವಿಲ್ಲ; ಆದರೆ ಇವುಗಳಿಂದ ಸ್ವರಾಜ್ಯಘಾತಮಾತ್ರ ಆದೀತು. ಹೊಸದಾಗಿ ಅನ್ನಮಾಡುವದಕ್ಕಿಂತ ಹಂಜಕ್ಕಿಯ ಅನ್ನಮಾಡಲಿಕ್ಕೆ ಜಾಣತನವು ಹೆಚ್ಚಾಗಿಬೇಕಾಗುವಂತೆ, ಹಾಗು ಹೊಸಮನೆ ಕಟ್ಟುವದಕ್ಕಿಂತ ಬಿದ್ದಮನೆ ನೆಟ್ಟಗೆಮಾಡಲಿಕ್ಕೆ ಹೆಚ್ಚು ಜಾಣತನ ಬೇಕಾಗುವಂತೆ ಕೆಟ್ಟ ಹಳ್ಳಿಗಳನ್ನು ನೆಟ್ಟಗೆಮಾಡಲಿಕ್ಕೆ ಬಹಳ ಜಾಣತನಬೇಕಾಗುತ್ತದೆ. ನಿಜವಾದ ಪ್ರಭಾವಶಾಲಿಯಿಂದಲ್ಲದೆ, ಪಕ್ಷಾಭಿಮಾನದ, ಅಹಂಮನ್ಯತೆಯ ದುರಹಂಕಾರಿಗಳಿಂದ ಈ ಕೆಲಸವಾಗಲಾರದು. ನಿಜವಾದ ಪ್ರಭಾವಶಾಲಿಗಳು ಪೂರ್ವಾಪರ ಸಂಗತಿಗಳನ್ನು ತತ್ವವರಿತು ವಿಚಾರಮಾಡುವರು. ನಾನು ಹೊಸ ಇತಿಹಾಸ ಬರೆಯುವೆನೆಂಬ ದುರಹಂಕಾರಕ್ಕೆ ಹೋಗುವದಿಲ್ಲ; ಹಿಂದಿನ ಪ್ರಭಾವಶಾಲಿಗಳು ಕಾಲಕ್ಕನುಸರಿಸಿ ಹಾಕಿದ್ದ ರಾಷ್ಟ್ರದ ಮಡಿಕೆಯನ್ನು

ಉದ್ಧಾವುತನದಿಂದ ಕೆಡಿಸುವ ಮನಸ್ಸು ಮಾಡುವದಿಲ್ಲ. ಮೊದಲಿನ ಮಡಿಕೆಯಲ್ಲಿ ಕೆಟ್ಟದ್ದ ಮಡಿಕೆಗಳನ್ನಷ್ಟು ಸರಿಮಾಡಿ, ಕಾಲಕ್ಕನುಸರಿಸಿ ಮಾಡಬೇಕಾದ ಮಡಿಕೆಯ ಹೆಚ್ಚು ಕಡಿಮೆಗಳನ್ನು ಜನಸಾಮಾನ್ಯದ ಮನಸ್ಸು ನೋಯದಂತೆ ಯುಕ್ತಿ ಪ್ರಯುಕ್ತಿಯಿಂದ ಮಾಡಬೇಕಾಗುವದು. ಅದು ಹೇಗೆಂಬದನ್ನು ಹೇಳಲಿಕ್ಕೆ ಇದು ಸ್ಥಳವಲ್ಲದ್ದರಿಂದ, ನಾವು ಈಗ ಹೆಚ್ಚಿಗೆ ಬರೆಯುವದಿಲ್ಲ; ಮಹಾತ್ಮರಾದದೇವರ್ಷಿ ನಾರದರ ವಿಚಾರದಂತೆ ರಾಜರೇ ಆಗಲಿ, ಪ್ರಜೆಗಳೇ ಆಗಲಿ, ಹಳ್ಳಿಗಳ ಉತ್ಕರ್ಷಕ್ಕೆ ಲಕ್ಷ್ಯಗೊಡುವದು ಹಿತಕರವೆಂಬದಿಷ್ಟೇಮಾತನ್ನು ಕಟ್ಟಕಡೆಯಲ್ಲಿ ಹೇಳಿಬಿಡುವೆವು.

---

## ೫ ಅವಿವೇಕಿ ಲೋಕಮತವು ಅನರ್ಥಕಾರಿಯು.

**ಲೋಕಮತದ ವಿಷಯದಲ್ಲಿ ಧರ್ಮರಾಜನ ಅಭಿಪ್ರಾಯ**—ಸಭಾಪರ್ವದ ೨೮ನೇ ಪುಟದಲ್ಲಿ ಧರ್ಮರಾಜನು ರಾಜಸೂಯ ಯಜ್ಞ ಮಾಡುವವಿಷಯದಲ್ಲಿ ಶ್ರೀಕೃಷ್ಣನನ್ನು ಕುರಿತು ಹೀಗೆ ಕೇಳಿರುವನು—“ ಎಲೈ ಕೃಷ್ಣಾ, ನನ್ನ ಮನಸ್ಸಿನಲ್ಲಿ ರಾಜಸೂಯ ಯಜ್ಞಮಾಡುವ ಇಚ್ಛೆಯುಂಟಾಗಿರುತ್ತದೆ; ಆದರೆ ಇಚ್ಛಿಸಿದ ಮಾತ್ರದಿಂದ ಅದು ಸಿದ್ಧಿಸುವದೆಂದು ಹೇಳಲಾಗುವದಿಲ್ಲ. ರಾಜಸೂಯ ಯಜ್ಞವು ಪೂರ್ಣವಾಗಬೇಕಾದರೆ ಏನು ಮಾಡಬೇಕೆಂಬದು ನಿನಗೆ ಗೊತ್ತಿರುತ್ತದೆ. ಸರ್ವಶಕ್ತಿಯುಳ್ಳವನಿಗೇ ಸರ್ವತ್ರ ಬಹುಮಾನವು ದೊರೆಯುತ್ತದೆ; ಮತ್ತು ಅಂಥ ಸಾರ್ವಭೌಮರಾಜನಿಂದಲೇ ರಾಜಸೂಯ ಯಜ್ಞವು ಸಿದ್ಧಿಸುತ್ತದೆ. ಇಂಥ ಶ್ರೇಷ್ಠಯಜ್ಞವನ್ನು ಮಾಡೆಂದು ನನ್ನ ಆಪ್ತೇಷ್ಟರು ಹೇಳುವರು; ಆದ್ದರಿಂದ ಕೃಷ್ಣಾ, ನಿನ್ನ ಅಭಿಪ್ರಾಯವು ಏನಿರುತ್ತದೆಂಬದನ್ನು ತಿಳಿಸಿದರೆ, ಅದರಂತೆ ನಾನು ನಿಶ್ಚಯವನ್ನು ಮಾಡುವೆನು. ದೇವಾ, ನಿನಗೇ ಈ ಮಾತು ಕೇಳುವಕಾರಣವೇನದಂರೆ, ಎಷ್ಟೋ ವಿನಯಶಾಲಿ ಪುರುಷರು ಎರಡನೆಯವರ ದೋಷಗಳನ್ನು ಎಂದೂ ಹೇಳುವದೇ ಇಲ್ಲವು; ಎಷ್ಟೋ ಜನರು ಸ್ವಾರ್ಥಕ್ಕಾಗಿ ಬೇಕೆಂತ ಪ್ರಿಯವಚನಗಳನ್ನು ನುಡಿಯುವರು; ಎಷ್ಟೋ

ಜನರಂತು ಪ್ರಿಯಭಾಷಣಮಾಡುವದೇ ತಮ್ಮ ಕರ್ತವ್ಯವೆಂದು ತಿಳಿಯು ವರು; ಆದ್ದರಿಂದ **ಯಾವದೊಂದು ಕಾರ್ಯವನ್ನು ಕೇವಲ ಲೋಕ ಮತವನ್ನು ಅನುಸರಿಸಿ ಮಾಡಿದರೆ, ಅದು ನಿಜವಾಗಿ ಹಿತಪ್ರದ ವಾದೀತೆಂದು ಹೇಳಲಾಗುವದಿಲ್ಲ.** ಇದನ್ನರಿತು ದೇವಾ, (೧) ನೀನು ಆ ತ್ರಿವಿಧ ಹೇತುಗಳನ್ನು ಬದಿಗಿಟ್ಟು, (೨) ಕಾಮಕ್ರೋಧಾದಿಗಳಿಂದ ವಿಕೃತ ನಾಗದೆ (೩) ಜನರಲ್ಲಿ ಅತ್ಯಂತ ಉಚಿತವಾದ ಕೃತ್ಯವನ್ನು ನನಗೆ ಸರಿಯಾಗಿ ಹೇಳು. ”

**ಲೋಕದ ಸ್ನೇಹ-ದ್ವೇಷರೂಪ ಸಂಬಂಧಗಳು**—ಮೇಲಿನ ಅವತರಣವಲ್ಲಿ ಲೋಕಮತವಿಷಯವಾಗಿ ಧರ್ಮರಾಜನು ಪಟ್ಟ ಅಭಿಪ್ರಾಯವು ನಿಜವಾಗಿಯೂ ವಿಚಾರಿಸತಕ್ಕದ್ದಾಗಿರುವದು. ಯಾಕಂದರೆ, ಅಲ್ಲಿ ಆತನು ಹಿತರಕವಾದ ಮತಕೊಡಲು ಅಧಿಕಾರಿಗಳು ಯಾರೆಂಬದನ್ನು ಬಹು ಗೂಢವಾಗಿಹೇಳಿರುವನು. ಅದನ್ನು ಇನ್ನು ಸ್ಪಷ್ಟಮಾಡಿ ವಿವರಿಸುವದು ಅವಶ್ಯವಾಗಿರುವದು. “ ಪಿಂಡಗಳಷ್ಟು ಪ್ರಕೃತಿಗಳು ”ಎಂಬ ಸಿದ್ಧಾಂತ ವಿದ್ದು, ಲೋಕವು ಅನಂತ ಪಿಂಡಾತ್ಮಕವಾಗಿರುವದರಿಂದ “ ಭಿನ್ನರುಚಿರ್ಹಿ ಲೋಕಃ ” ಎಂಬ ಉಕ್ತಿಯಂತೆ ಪ್ರತಿಒಬ್ಬರ ಅಭಿರುಚಿಗಳು ಭಿನ್ನಭಿನ್ನ ವಾಗಿರುವವು. ಹೀಗೆ ಜನರ ಅಭಿರುಚಿಗಳು ಭಿನ್ನವಾದಂತೆ, ಅವರವರ ಅಭಿರುಚಿಗಳಿಗನಸರಿಸಿ ಅವರವರ ಮತಗಳೂ ಭಿನ್ನವಾಗತಕ್ಕವೇ. ಹೀಗೆ ಜನರ ಅಭಿರುಚಿಗಳು ಭಿನ್ನವಾಗಲಿಕ್ಕೆ ಅವರವರ ಭಿನ್ನ ಭಿನ್ನವಾದ ಕರ್ಮ ಗಳೇ ಕಾರಣವು. ಅವರಲ್ಲಿಯೂ ಮನುಷ್ಯಪ್ರಾಣಿಯು ಜ್ಞಾನಸಂಪನ್ನನಾಗಿರುವದರಿಂದ, ಇತರ ಪ್ರಾಣಿಗಳಿಗಿಂತ ಈತನ ಕರ್ಮಗಳ ವೈವಿಧ್ಯವು ವಿಶೇಷ ವಾಗಿರುವದು; ಆದ್ದರಿಂದ “ ಬುದ್ಧಿಃಕರ್ಮಾನುಸಾರಿಣೀ ” ಎಂಬ ಸಿದ್ಧಾಂತ ಕ್ಕನುಸರಿಸಿ “ ಎತ್ತು ಎರೆಗೆ ಎಳೆದರೆ ಕೋಣವು ಕೆರೆಗೆ ಎಳೆಯಿತೆಂ ” ಬಂತೆ, ಅಥವಾ “ ಗಂಡನಿಗೆ ಹೊರಸು ಆಗದಿದ್ದರೆ ಹೆಂಡತಿಗೆ ನೆಲವಾಗದೆಂ ” ಬಂತೆ ಸಾಧಾರಣವಾಗಿ ಪ್ರತಿಒಬ್ಬನ ಸ್ಥಿತಿಯು ಇರುತ್ತದೆಂದು ಹೇಳಬಹುದು, ಆದರೆ ಸೃಷ್ಟಿಕರ್ತೃವು ಈ ಸೃಷ್ಟಿಯನ್ನು ಮಾಡುವಾಗ ಅದರೊಳಗಿನ ವಸ್ತು ಜಾಲವನ್ನು ಪರಸ್ಪರ ಸಂಬಂಧಿಸಿ ಮಾಡಿರುವನಲ್ಲದೆ, ಎರಡನೆಯ ವಸ್ತುವಿನ ಹಂಗು ಇಲ್ಲದೆ ಅವವಷ್ಟಕ್ಕೆ ಸ್ವತಂತ್ರವಾಗಿ ಇರುವಂತೆ ಆ ವಸ್ತುಜಾಲವನ್ನು

ಬಿಡಿಬಿಡಿಯಾಗಿ ಮಾಡಿರುವದಿಲ್ಲ. ಸಹಸ್ರಾವಧಿ-ಲಕ್ಷಾವಧಿ ಮೈಲುಗಳ ಮೇಲಿರುವ ಗ್ರಹಾದಿಗಳಿಗೂ, ಭೂಲೋಕದ ಪ್ರಾಣಿಗಳಿಗೂ ಒಂದುಬಗೆಯ ಸಂಬಂಧವಿರುವದರಿಂದ, ಗ್ರಹಗಳ ಸ್ಥಿತಿ-ಗತಿಗಳ ಭಿನ್ನತ್ವದಂತೆ ಪ್ರಾಣಿಗಳ ಸ್ಥಿತಿಗತಿಗಳು ಭಿನ್ನವಾಗುತ್ತವೆಂದು ಫಲಜ್ಯೋತಿಷವು ಹೇಳುತ್ತಿರುವವಾತು, ಅನಾದಿಕಾಲದಿಂದ ಅನುಭವಸಿದ್ಧವಾಗಿರುತ್ತದೆ. ಅಂದಬಳಿಕ ಒಂದೇ ಭೂಲೋಕದಲ್ಲಿರುವವಸ್ತುಗಳು ತಮ್ಮ ಸಾನ್ನಿಧ್ಯಸ್ವರೂಪದಂತೆ ಪರಸ್ಪರ ಸಂಬಂಧವುಳ್ಳವಾಗಿರುತ್ತವೆಂದು ಯಾಕೆ ಹೇಳಬೇಕು? ಆದ್ದರಿಂದ ಲೋಕವು ತನ್ನ ಭಿನ್ನ ಅಭಿರುಚಿಯಮೂಲಕ ಎಷ್ಟು ಭಿನ್ನಮತಗಳುಳ್ಳದ್ದಾಗಿದ್ದರೂ ಅದರ ವ್ಯಾಪವು ಹೆಚ್ಚಿದಮಾನದಿಂದ ಅನ್ಯವಸ್ತುಗಳೊಡನೆ ಅದರ ಸಂಬಂಧವು ಹೆಚ್ಚಾಗುತ್ತ ಹೋಗುತ್ತದೆಂದು ತಿಳಿಯತಕ್ಕದ್ದು. ಆ ಸಂಬಂಧವು (೧) ಆಹಾರಾತ್ಮಕ. (೨) ವಿಹಾರಾತ್ಮಕ. (೩) ವ್ಯವಹಾರಾತ್ಮಕ ಎಂದು ಮೂರು ವಿಧವಾಗಿರುತ್ತದೆ. ಪ್ರಾಣಿಗಳು ತಮ್ಮ ತಮ್ಮ ಪರಿಸ್ಥಿತಿಯಂತೆ, ಹಾಗು ಗರಜುಗಳಂತೆ ಅನ್ಯವಸ್ತುಗಳೊಡನೆ ಸಂಬಂಧ ಬಳಿಸಿದಹೊರತು ಅವಕ್ಕೆ ಆಹಾರ-ವಿಹಾರ-ವ್ಯವಹಾರಗಳ ಪ್ರಾಪ್ತಿಯು ಆಗದು. ಅಥವಾ ಪ್ರತಿ ಒಂದು ವಸ್ತುವು ಸೃಷ್ಟಿಕರ್ತೃವಿನ ಸಂಕೇತಕ್ಕನುಸರಿಸಿ ಪರಸ್ಪರ ಆಹಾರ-ವಿಹಾರ-ವ್ಯವಹಾರಾತ್ಮಕ ಸಂಬಂಧವುಳ್ಳದ್ದಾಗಿರುತ್ತದೆಂದು ಹೇಳಬಹುದು; ಅಂದರೆ ಪ್ರತಿಒಂದು ವಸ್ತುವು ಸೃಷ್ಟಿಕರ್ತಾರನ ಸಂಕೇತದಂತೆ ಅನ್ಯವಸ್ತುವಿಗೆ ಭೋಗ್ಯವೂ ಆಗಿರುವದು, ಅನ್ಯವಸ್ತುವನ್ನು ಭೋಗಿಸುವಂತಹದೂ ಆಗಿರುವದು. ಆದ್ದರಿಂದ ಪ್ರಾಣಿಗಳು ಈಶ್ವರನ ಈ ಸೃಷ್ಟಿರೂಪತಂತ್ರಕ್ಕೆ ಒಳಗಾಗಿರುವವರೆಗೆ ಈ ಆಹಾರ-ವಿಹಾರ-ವ್ಯವಹಾರ-ಪ್ರಾಪ್ತಿಗಾಗಿ ಅನ್ಯವಸ್ತುಗಳ ವಿಷಯವಾಗಿ ಆಗುವ ತಮ್ಮ ಅನುಕೂಲ-ಪ್ರತಿಕೂಲ ಮತಗಳಿಗನುಸರಿಸಿ ಅಹಂಕಾರ ಮಮಕಾರವುಳ್ಳವಾಗಿ ಆ ಅನ್ಯವಸ್ತುಗಳೊಡನೆ ಕ್ರಮವಾಗಿ ಸ್ನೇಹರೂಪ ಸಂಬಂಧವನ್ನಾಗಲಿ, ದ್ವೇಷರೂಪ ಸಂಬಂಧವನ್ನಾಗಲಿ ಬಳಿಸಬೇಕಾಗುವದು.

**೩ ಸಂಬಂಧಗಳ ಸ್ವಾಭಾವಿಕತೆಯೂ, ಕೃತ್ರಿಮತೆಯೂ**— ಮೇಲೆ ಹೇಳಿರುವ ಪ್ರಾಣಿಗಳ ಪರಸ್ಪರ ಸ್ನೇಹ-ದ್ವೇಷರೂಪಸಂಬಂಧವು, ಸ್ವಾಭಾವಿಕವೆಂತಲೂ, ಕೃತ್ರಿಮವೆಂತಲೂ ಎರಡುವಿಧವಾಗಿರುವದು. ಪ್ರಾಣಿ

ಗಳ ಈಶ ನಿರ್ಮಿತವಾದ ಸೃಷ್ಟಿಚಾಲಕ ಸ್ನೇಹದ್ವೇಷರೂಪವೆನಿಸುವ ರಕ್ತ ಸಂಬಂಧವು ಸ್ವಾಭಾವಿಕ ಸಂಬಂಧವೆನಿಸುವದು; ಸ್ವಾರ್ಥಸಾಧನದ ಹೇತುವಿನಿಂದ ಮನುಷ್ಯಪ್ರಾಣಿಯು ಏಕಸಂಸ್ಕೃತಿ, ಏಕದೇಶವಾಸ ಇವುಗಳ ನೆವದಿಂದ ಮಾಡಿಕೊಂಡಿರುವ ಸ್ನೇಹ–ದ್ವೇಷರೂಪ ಸಂಬಂಧಗಳು ಕೃತ್ರಿಮಸಂಬಂಧಗಳಾಗಿರುವವು. ಒಟ್ಟಿಗೆ ಸಂಬಂಧಗಳು ಪ್ರಾಮುಖ್ಯವಾಗಿ— ೧ ರಕ್ತ ಸಂಬಂಧ. ೨ ಸಂಸ್ಕೃತಿಸಂಬಂಧ. ೩ ದೇಶಸಂಬಂಧ. ಎಂಬ ಮೂರು ಬಗೆಯವಾಗಿರುವವು. ಅವುಗಳಲ್ಲಿ ರಕ್ತಸಂಬಂಧಿಕರ ಸಂಗ್ರಹಕ್ಕೆ ಕುಟುಂಬವೆಂತಲೂ, ಏಕಸಂಸ್ಕೃತಿಯವರ ಸಂಗ್ರಹಕ್ಕೆ ಸಮಾಜವೆಂತಲೂ, ಏಕದೇಶವಾಸಿಗಳ ಸಂಗ್ರಹಕ್ಕೆ ರಾಷ್ಟ್ರವೆಂತಲೂ ವ್ಯಾಹಹಾರಿಕ ಸಂಕೇತಗಳಿರುತ್ತವೆ. ರಕ್ತಸಂಬಂಧವೆಂಬ ಒಂದೇ ಸಂಬಂಧವುಳ್ಳ ಮನುಷ್ಯೇತರ ಪ್ರಾಣಿಗಳಾಗಲಿ, ರಕ್ತಸಂಬಂಧ, ಸಂಸ್ಕೃತಿಸಂಬಂಧ, ಏಕ ದೇಶವಾಸಸಂಬಂಧ ಎಂಬ ಮೂರು ಬಗೆಯ ಸಂಬಂಧಗಳುಳ್ಳ ಮನುಷ್ಯಪ್ರಾಣಿಯಾಗಲಿ, ಹುಟ್ಟಿದಕೂಡಲೆ ದೇವರು ತನಗೆ ನಿಯಮಿಸಿಕೊಟ್ಟಿರುವ ವಸ್ತುಗಳನ್ನು ಸ್ವಾಭಾವಿಕವಾಗಿ ಸೇವಿಸತೊಡಗುವದು. ಹೀಗೆ ಮೊದಲು ಪ್ರಾಣಿಗಳ ಆಹಾರಕ್ಕೂ, ಮುಂದೆ ಬರಬರುತ್ತ ಪ್ರಾಣಿಗಳ ವಿಹಾರ–ವ್ಯವಹಾರಗಳಿಗೂ ಮೂಲವಾದ, ಅಥವಾ ಸಾಧನವಾದ ವಸ್ತುಗಳಿಗೆ ವಿಷಯುಗಳೆನ್ನುವರು. ಈ ವಿಷಯುಗಳಸೇವನವು ಪ್ರಾಣಿಗಳ ಅಪರಿಹಾರ್ಯವಾದ ಹುಟ್ಟುಗುಣವಾಗಿರುವದು.

**೪ ವಿಷಯುಸೇವನದ ದ್ವಿವಿಧಗಳು**—ಹೀಗೆವಿಷಯುಸೇವನವು ಹುಟ್ಟಿದಾಗಿನಿಂದ ಸಾಯುವವರೆಗೆ ಪ್ರಾಣಿಗಳಬೆನ್ನು ಬಿಡದಿದ್ದರೂ, ಜ್ಞಾನವಿಹೀನವಾದ ಮನುಷ್ಯೇತರ ಪ್ರಾಣಿಗಳ ವಿಷಯುಸೇವನಕ್ರಮವೂ, ಜ್ಞಾನಸಂಪನ್ನವಾದ ಮನುಷ್ಯಪ್ರಾಣಿಯ ವಿಷಯುಸೇವನಕ್ರಮವೂ ಭಿನ್ನ ಭಿನ್ನವಾಗಿರುವವು. ಮನುಷ್ಯೇತರ ಪ್ರಾಣಿಗಳು ತಮ್ಮ ಅಜ್ಞಾನದಮೂಲಕ ಪರಮೇಶ್ವರನ ಸೃಷ್ಟಿಯ ನಿಯಮದಂತೆ ತಮ್ಮ ಹುಟ್ಟುಗುಣಕ್ಕನುಸರಿಸಿ ಮೊದಲಿನಿಂದ ಕಡೆಯತನಕ ನಿಯಮಿತವಾಗಿ ವಿಷಯುಸೇವನ ಮಾಡುತ್ತಾಬಂದಿರುವದರಿಂದ, ಅವುಗಳ ಸ್ಥಿತಿಗತಿಗಳು ಬಹುತರ, ಅಂದರೆ ವಿಶೇಷತರದ ಸಮಾಗಮಾದಿಗಳ ಯೋಗವು ಒದಗದಿರಲು, ಅನಾದಿಕಾಲದಿಂದ ಒಂದೇವಿಧದ ಪರಂಪರೆಯಿಂದ ಸಾಗುತ್ತಬಂದಿರುವವು; ಆದರೆ ಮನುಷ್ಯಪ್ರಾಣಿಯು

ಮಾತು ಹಾಗಲ್ಲ. ಆತನು ಇತರ ಪ್ರಾಣಿಗಳಂತೆ ನಿಯಮಿತವಾಗಿ ವಿಷಯಸೇವನಮಾಡದೆ, ತನಗಿರುವ ಜ್ಞಾನದಯೋಗದಿಂದ ತನ್ನ ಕಲ್ಪಕತೆಯೂ, ವಿಚಾರಶಕ್ತಿಯೂ ವಿವಿಧವಾಗುತ್ತ ಹೋದಂತೆ, ಹೆಚ್ಚು ಹೆಚ್ಚು ವಿಷಯಾಸಕ್ತನಾಗುತ್ತ ಮನಸ್ಸಿಗೆ ಬಂದಂತೆ ವಿಷಯಗಳನ್ನು ಸೇವಿಸುತ್ತ ಹೋಗುವನು. ಆದ್ದರಿಂದ ಆತನ ಕೌಟುಂಬಿಕ, ಸಾಮಾಜಿಕ, ರಾಷ್ಟ್ರೀಯ ಸ್ಥಿತಿಗತಿಗಳು ಅನಾದಿಕಾಲದಿಂದ ಭಿನ್ನ ಭಿನ್ನವಾಗುತ್ತ ಬಂದಿರುತ್ತವೆ. ವಿಷಯಸೇವನವು ಪ್ರಾಣಿಗಳ ಅಸ್ತಿತ್ವಸಾಧನವಾಗಿದ್ದರೂ, ಆ ವಿಷಯಗಳನ್ನು ಮಿತಿಮೀರಿ ಸೇವಿಸಿದರೆ ಪ್ರಾಣಿಗಳು ರೋಗಗ್ರಸ್ತವಾಗಿ,ಅವುಗಳ ನಾಶವಾಗುವದು ಸಿದ್ಧಾಂತವಾಗಿರುವದು. ಆದ್ದರಿಂದಲೇ ದೇವರು ಸೃಷ್ಟಿಯನ್ನು ಮಾಡುವಾಗ ವಿಷಯಗಳು ಪ್ರಾಣಿಗಳಿಗೆ ಮಾರಕವಾಗದೆ ತಾರಕವಾಗಬೇಕೆಂದು, ವಿಷಯಸೇವನದ ಸಂಬಂಧದ ವಿಧಿ–ನಿಷೇಧಾತ್ಮಕ ನಿಯಮಗಳಿಂದ ಆ ಪ್ರಾಣಿಗಳನ್ನು ಬಂಧಿಸಿರುವನು. ವಿಷಯಸೇವನದ ಸಂಬಂಧದ ಈ ಈಶನಿರ್ಮಿತ ವಿಧಿ–ನಿಷೇಧಾತ್ಮಕನಿಯಮ–ಸಮುಚ್ಚಕ್ಕೇ ಧರ್ಮವೆನ್ನುವರು. ಪರಮೇಶ್ವರನಿಂದ ನಿರ್ಮಿತವಾದ ಈ ಧರ್ಮದ ಮೂಲತತ್ವಗಳನ್ನು ಮೇಲೆ ಹೇಳಿದಂತೆ ಮನುಷ್ಯೇತರ ಪ್ರಾಣಿಗಳು ಅವ್ಯಾಹತವಾಗಿ ಪಾಲಿಸುತ್ತ ಬಂದಿದ್ದರೂ, ಮನುಷ್ಯರಲ್ಲಿ ವಿವೇಕಿಗಳಾದವರು ಈ ಧರ್ಮತತ್ವಗಳನ್ನು ದೇಶ ಕಾಲ–ಪರಿಸ್ಥಿತಿಗಳಿಗನುಸರಿಸಿ ಪಾಲಿಸುತ್ತಲೂ, ಅವಿವೇಕಿಗಳಾದವರು ಆ ಧಾರ್ಮಿಕತತ್ವಗಳ ಬಂಧನವನ್ನು ಹರಿದುಚಲ್ಲಿ ಸ್ವೇಚ್ಛೆಯಿಂದ ವಿಷಯ ಸೇವನಮಾಡುತ್ತಲೂ ಬಂದಿರುವರು. ಒಟ್ಟಿಗೆ, ಮನುಷ್ಯರ ವಿಷಯಸೇವನವು ಧಾರ್ಮಿಕವೆಂತಲೂ, ಅಧಾರ್ಮಿಕವೆಂತಲೂ ದ್ವಿವಿಧವಾಗಿರುವದು. ಧಾರ್ಮಿಕರು ಧರ್ಮನಿಷ್ಠರಾಗಿರುವರು; ಅಧಾರ್ಮಿಕರು ವಿಷಯನಿಷ್ಠರಾಗಿರುವರು.

೫ **ಧರ್ಮನಿಷ್ಠರ ಹಾಗು ವಿಷಯನಿಷ್ಠರ ಸ್ಥಿತಿ–ಗತಿಗಳಲ್ಲಿಯ ವೈಲಕ್ಷಣ್ಯ**– ರಾಜ್ಯರೂಪ ಕುಟುಂಬದಲ್ಲಿ ರಾಜನು ಕುಟುಂಬದ ಮುಖ್ಯನೂ, ಪ್ರಜೆಗಳು ಪರಿವಾರವೂ ಆಗಿರುವರು. ಧರ್ಮಮೂರ್ತಿಯಾದ ಧರ್ಮರಾಜನ ಪ್ರಜೆಗಳು “ ಯಥಾರಾಜಾತಥಾಪ್ರಜಾ ” ಎಂಬ ಉಕ್ತಿಯಂತೆ ಧರ್ಮಿಷ್ಠರೇ ಆದದ್ದರಿಂದ, ಧರ್ಮರಾಜನಲ್ಲಿ ಆತನ ಪ್ರಜೆಗಳ ವಿಶ್ವಾ

ಸವೂ, ಪ್ರಜೆಗಳಲ್ಲಿ ಧರ್ಮರಾಜನ ವಿಶ್ವಾಸವೂ ಇದ್ದವು; ಯಾಕಂದರೆ ಧರ್ಮರಾಜನು ತನ್ನ ಸನಾತನ ರಾಜಧರ್ಮದಂತೆ ಪ್ರಜೆಗಳನ್ನು ತನ್ನ ಮಕ್ಕಳೆಂದು ತಿಳಿದು ಅವರವರ ಧರ್ಮಕ್ಕೆ ಲೋಪಬಾರದಂತೆ ರಾಜ್ಯವಾಳಿ, ಪ್ರಜೆಗಳಿಗೆ ಸುಖವನ್ನುಂಟುಮಾಡುತ್ತಿದ್ದನು. ಅದರಂತೆ ಪ್ರಜೆಗಳಾದರೂ ತಮ್ಮ ಸನಾತನ ಪ್ರಜಾಧರ್ಮದಂತೆ ನಡೆದು ತಮ್ಮ ತಂದೆಯಲ್ಲಿಯಂತೆ ಧರ್ಮರಾಜನಲ್ಲಿ ನಿಷ್ಠೆಯುಳ್ಳವರಾಗಿದ್ದರಲ್ಲದೆ, ವಿಷಯಸುಖದ ಸೆಳವಿಗೆ ಬಿದ್ದು, ಅಧರ್ಮಿಷ್ಠರಾಗಿ, ಅಂದರೆ ತಮ್ಮ ಪ್ರಜಾಧರ್ಮವನ್ನು ಅತಿಕ್ರಮಿಸಿ ಅಮರ್ಯಾದಿತ ವಿಷಯಸುಖಕ್ಕಾಗಿ ಕಿರಿಕಿರಿಮಾಡುತ್ತ, ರಾಜಶಾಸನವನ್ನುಲ್ಲಂಘಿಸಿ ರಾಜನಿಗೆ ತಾಪವನ್ನುಂಟುಮಾಡುತ್ತಿದ್ದಿಲ್ಲ; ಆದ್ದರಿಂದ ಆ ಧರ್ಮಿಷ್ಠ ರಾಜಪ್ರಜರ ಪರಸ್ಪರ ವ್ಯವಹಾರವು ಸುಖಸಮಾಧಾನದಿಂದ ನಡೆದು, ಅವರ ಪರಸ್ಪರ ವಿತುಷ್ಟತೆಗೆ ಆಸ್ಪದವುಂಟಾಗುತ್ತಿದ್ದಿಲ್ಲ. ಇಂಥ ಧರ್ಮಿಷ್ಠ ರಾಜಪ್ರಜರಿಬ್ಬರೂ ಧರ್ಮಬಂಧನಬದ್ಧರಾಗಿ ಒಂದು ಕುಟುಂಬದೊಳಗಿನ ಧರ್ಮಿಷ್ಠ ತಂದೆ ಮಕ್ಕಳಂತೆ ಒಕ್ಕಟ್ಟಿನಿಂದ ನಡೆದುಕೊಳ್ಳುತ್ತ, ಇಬ್ಬರೂ ಒಟ್ಟುಗೂಡಿಯೇ ಆತ್ಮಹಿತವೃದ್ಧಿಯನ್ನಾಗಲಿ, ಪರರಾಷ್ಟ್ರೀಯ ಹಿತಾಹಿತಗಳನ್ನಾಗಲಿ ಸಾಧಿಸುವರಲ್ಲದೆ, ಒಬ್ಬರ ಉತ್ಕರ್ಷಕ್ಕಾಗಿ ಒಬ್ಬರು ಅಸೂಯೆಪಟ್ಟು ವಿಕಾರವಶರಾಗಿ ತಮ್ಮತಮ್ಮೊಳಗೆ ವಿತುಷ್ಟತೆಯಿಂದ ನಡೆಯುವದಿಲ್ಲ; ಆವರೆ ಅವರಲ್ಲಿಯ ಧರ್ಮಬಂಧನವು ಶಿಥಿಲವಾದ ಮಾನದಿಂದ ಅವರಲ್ಲಿ ವಿತುಷ್ಟತೆಯು ಹೆಚ್ಚುವದೆಂದು ಮಾತ್ರ ತಿಳಿಯತಕ್ಕದ್ದು. 

ಹೀಗೆ ಧರ್ಮನಿಷ್ಠರಾಜಪ್ರಜರ ಮುಖ್ಯ ಲಕ್ಷಣವನ್ನು ಮೇಲೆ ಹೇಳಿ ತಷ್ಟೆ? ಆದರೆ ವಿಷಯನಿಷ್ಠ ರಾಜಪ್ರಜರ ಸ್ವರೂಪದಲ್ಲಿ ಈ ಧರ್ಮಿಷ್ಠರಾಜಪ್ರಜರವಿರುದ್ಧ ಲಕ್ಷಣಗಳು ತೋರುವವು. ಮೂಲತಃ ವಿಷಯನಿಷ್ಠ ರಾಜಪ್ರಜರಿಗೆ, ರಾಜಪ್ರಜರಲ್ಲಿರುವ ಪಿತಾಪುತ್ರ ಸಂಬಂಧವೇ ಅಪಮಾನಾಸ್ಪದವಾಗಿ ತೋರುವದರಿಂದ, ಆ ಸಂಬಂಧವು ಅವರಿಗೆ ಒಪ್ಪಿಗೆಯಾಗುವದಿಲ್ಲ; ಆದ್ದರಿಂದ ತಾವು ಒಂದು ಕುಟುಂಬದವರೆಂಬ ಮಮಕಾರದ ಭಾವನೆಯು, ಅಥವಾ ಪರಸ್ಪರ ನಂಬಿಗೆಯು ಅವರಲ್ಲಿರುವದಿಲ್ಲ. ಈ ವಿಷಯನಿಷ್ಠ ರಾಜಪ್ರಜರಲ್ಲಿ ಪ್ರಜೆಗಳಿಗೆ ರಾಜನು ತಮ್ಮ ಸುಖಕ್ಕೆ ಕಂಟಕಪ್ರಾಯನಾಗಿ ತೋರಿ, ಆ ಕಂಟಕನನ್ನು ಕಿತ್ತು ಒಗೆಯುವದಕ್ಕೆ, ಅಥವಾ ಆ ಕಂಟಕದ ತುದಿಯನ್ನು

ಮುಂಡಮಾಡಲಿಕ್ಕೆ ಪ್ರಜೆಗಳು ಯತ್ನಿಸುವರು. ಅದರಂತೆ ರಾಜನಿಗೆ ಪ್ರಜೆಗಳು ತನ್ನ ಯಥೇಚ್ಛ ಸುಖಾನುಭವದ ಸಾಧನಗಳಾಗಿ ತೋರಿ, ರಾಜನು ಪ್ರಜೆಗಳ ರಕ್ತಶೋಷಣದ ಕ್ರೂರ ಉಪಾಯಗಳನ್ನು ಬಳಿಕೆಯಲ್ಲಿ ತರಲು ಯತ್ನಿಸುವನು. ಒಟ್ಟಿಗೆ ವಿಷಯನಿಷ್ಠ ರಾಜಪ್ರಜರು ಐಹಿಕ ವಿಷಯಸುಖವನ್ನು ಸ್ವಚ್ಛಂದವಾಗಿ ಹರಿದು ಹಂಚಿಕೊಂಡು ಭೋಗಿಸುವದಕ್ಕೂ, ಅನ್ಯ ದೇಶೀಯರ ವಿಷಯ ಸುಖಗಳನ್ನು ಕಸಿದುಕೊಳ್ಳುವದಕ್ಕೂ ಪರಸ್ಪರ ಸಂಬಂಧ ಬಳಿಸಿರುವರಲ್ಲದೆ ಪಾರತ್ರಿಕಾದಿ ಉದಾತ್ತ ಸುಖಭೋಗದ, ಅಥವಾ ಮೋಕ್ಷದಂಥ ಶ್ರೇಷ್ಠ ಪುರುಷಾರ್ಥಸಾಧನದ ಗುರಿಯಿಟ್ಟು ಪರಸ್ಪರ ಸಂಬಂಧ ಬಳಿಸಿರುವದಿಲ್ಲ.

ಹೀಗೆ ಧರ್ಮನಿಷ್ಠರಲ್ಲಿಯು ಹಾಗು ವಿಷಯನಿಷ್ಠರಲ್ಲಿಯು ಇನ್ನೂ ಕೆಲವು ವೈಲಕ್ಷಣ್ಯಗಳನ್ನು ಉಲ್ಲೇಖಿಸುವದು ವಿಷಯ ವಿವೇಚನದ ಸ್ಪಷ್ಟತೆಗೆ ಅವಶ್ಯವಾಗಿರುವದು. ಧರ್ಮನಿಷ್ಠ ರಾಜಪ್ರಜರ ಅಧಿಷ್ಠಾನದಲ್ಲಿ ಶಾಂತಿದಾಯಕವಾದ ಧರ್ಮವಿದ್ದರೆ, ವಿಷಯನಿಷ್ಠ ರಾಜಪ್ರಜರ ಅಧಿಷ್ಠಾನದಲ್ಲಿ ತಾಪದಾಯಕವಾದ ವಿಷಯಸುಖವಿರುತ್ತದೆ. ಜನರ ಕರ್ಮಗಳು ಭಿನ್ನ ಭಿನ್ನವಾಗಿರುವದರಿಂದ ಅವರವರ ಆ ಸತ್ಕರ್ಮ—ದುಷ್ಕರ್ಮಗಳ ಮಾನವಿದ್ದಂತೆ ಉಂಟಾಗುವ ಪುಣ್ಯಪಾಪಗಳ ಮಾನದಿಂದ ಅವರವರ ಸುಖದುಃಖಗಳ ಮಾನವು ಭಿನ್ನ ಭಿನ್ನವಾಗಿರುತ್ತವೆಂದು ತಿಳಿದು, ಧರ್ಮನಿಷ್ಠರು ಪ್ರಾಪ್ತಸುಖದುಃಖಗಳಲ್ಲಿ ಸಮಾಧಾನದಿಂದ ಇದ್ದು, ಸಹಿಷ್ಣುಗಳಾಗಿ ಜಗತ್ತಿನ ಶಾಂತಿಯ ಅಸ್ತಿತ್ವಕ್ಕೆ ಅನುಕೂಲವಾಗಿ ತಮ್ಮ ತಮ್ಮ ವ್ಯವಹಾರಗಳನ್ನು ಸಾಗಿಸುವರು; ಆದರೆ ವಿಷಯನಿಷ್ಠ ರಾಜಪ್ರಜರಿಗೆ ಈ ಕರ್ಮದತೊಡಕು ಅವರ ಅದೂರದರ್ಶಿತ್ವದ ಮೂಲಕ ಒಪ್ಪಿಗೆಯಾಗದಿರುವದರಿಂದ, ಅವರು ತಮ್ಮವರೆಲ್ಲರಿಗೂ ಸಮಾನಸುಖವೂ, ಸಮಾನ ಅಧಿಕಾರವೂ, ಸಮಾನ ಯೋಗ್ಯತೆಯೂ ದೊರೆಯಬೇಕೆಂಬ ಸೃಷ್ಟಿಕ್ರಮದ ವಿರುದ್ಧ ಸಂಗತಿಗಾಗಿ ಹೆಣಗಿ, ಜಗತ್ತಿನ ತಾಪವನ್ನು ಹೆಚ್ಚಿಸುವರು. ಧರ್ಮನಿಷ್ಠ ರಾಜಪ್ರಜರ ಶಾಂತವ್ಯವಹಾರಕ್ಕೆ ಸನಾತನ ಧರ್ಮತತ್ವಗಳಿಗನುಸರಿಸಿ ಮಾಡಿದ ಜ್ಞಾನಿಗಳ ಧರ್ಮನಿಬಂಧನೆಗಳು ಶಾಶ್ವತ ಆಧಾರಗಳಾಗಿರುವವು; ಆದರೆ ವಿಷಯನಿಷ್ಠ ರಾಜಪ್ರಜರಿಗೆ, ತಮ್ಮ ವಿಷಯತೃಷ್ಣಾತೃಪ್ತಿಗಾಗಿ ಪರ

ಸ್ಪರರು ಹೊಡೆದಾಡುತ್ತ ಬಹುಮತದಿಂದ ಹೊಸ ಹೊಸ ನಿಬಂಧನೆಗಳನ್ನು ಯಾವಾಗಲೂ ಮಾಡುತ್ತಿರಬೇಕಾಗುವದು. ಧರ್ಮನಿಷ್ಠ ರಾಜಪ್ರಜರಲ್ಲಿ ಶ್ರೇಷ್ಠ-ಕನಿಷ್ಠ ಎಂಬ ತಾರತಮ್ಯವು ಸೃಷ್ಟಿಯಲ್ಲಿ ಸ್ವಾಭಾವಿಕವಾಗಿಯೇ ಇರುವದೆಂಬ ನಂಬಿಗೆಯಿರುವದರಿಂದ, ಆರಾಜ—ಪ್ರಜರಿಬ್ಬರ ಸ್ವಚ್ಛಂದವೃತ್ತಿಗೂ ಅವರ ಸೌಜನ್ಯದಮೂಲಕ ಪ್ರತಿಬಂಧವುಂಟಾಗುವದು; ಆದರೆ ವಿಷಯನಿಷ್ಠ ರಾಜಪ್ರಜರಲ್ಲಿ ಸರ್ವತ್ರ ಸಮಭಾವದ ಕೃತ್ರಿಮ ಬಳಿಕೆಯುಂಟಾಗಿ ಅವರ, ವಿಶೇಷವಾಗಿ ಪ್ರಜೆಗಳ ಸ್ವಚ್ಛಂದವೃತ್ತಿಗೆ ನಿರ್ಬಂಧವಿಲ್ಲದಾಗುವದು. ಧರ್ಮನಿಷ್ಠ ರಾಜಪ್ರಜರು ಸಾಧನಗಳ ಸಾರ್ವತ್ರಿಕ ಬಳಿಕೆಯ ಸ್ವಾತಂತ್ರ್ಯಕ್ಕೆ ಬಾಧೆಬರುವಂತೆ, ತಮ್ಮ ಬುದ್ಧಿವೈಭವವನ್ನು ಆ ಸುರೀಯಾಂತ್ರಿಕಪ್ರಗತಿಗಾಗಿ ಮಿತಿಮೀರಿ ವೆಚ್ಚಮಾಡುವದಿಲ್ಲ; ಆದರೆ ವಿಷಯನಿಷ್ಠ ರಾಜಪ್ರಜರು ಪರಕೀಯರ ವಿತ್ತಶೋಷಣೈಕ ದೃಷ್ಟಿಯವರಾಗಿ ಯಾಂತ್ರಿಕಕಲೆಯ ಅಭಿವೃದ್ಧಿಗಾಗಿ ತಮ್ಮ ಬುದ್ಧಿವೈಭವವನ್ನು ವೆಚ್ಚಮಾಡಿ ಜಗತ್ತಿನ ಸ್ಥಿತಿಯವಿಷಮತೆಗೆ ಆಸ್ಪದಮಾಡಿಕೊಟ್ಟು ಜಗತ್ತಿನ ತಾಪವನ್ನು ಹೆಚ್ಚಿಸುವರು. ಧರ್ಮನಿಷ್ಠರಾಜಪ್ರಜರು ಮತದಾರರ ಅಧಿಕಾರಸಂಪನ್ನತೆಗೆ ಮಹತ್ವಕೊಟ್ಟರೆ, ವಿಷಯನಿಷ್ಠ ರಾಜಪ್ರಜರು ಮತದಾರರ ಸಂಖ್ಯಾಬಾಹುಲ್ಯಕ್ಕೆ ಮಹತ್ವಕೊಡುವರು. ಧರ್ಮನಿಷ್ಠ-ರಾಜ-ಪ್ರಜರ ವ್ಯವಹಾರದಲ್ಲಿ ನೀತಿಗೆ ಮಹತ್ವವಿದ್ದರೆ, ವಿಷಯನಿಷ್ಠರಾಜಪ್ರಜರ ವ್ಯವಹಾರದಲ್ಲಿ ದುಡ್ಡಿಗೆ ಮಹತ್ವವಿರುತ್ತದೆ. ಧರ್ಮನಿಷ್ಠ ರಾಜಪ್ರಜರಲ್ಲಿ ಸಾತ್ವಿಕ ವ್ಯವಹಾರಕ್ಕೆ ಮಹತ್ವವಿದ್ದರೆ, ವಿಷಯನಿಷ್ಠರಾಜಪ್ರಜರಲ್ಲಿ ರಾಜಸ—ತಾಮಸವ್ಯವಹಾರಗಳಿಗೆ ಮಹತ್ವವಿರುತ್ತದೆ. ಧರ್ಮನಿಷ್ಠ ರಾಜಪ್ರಜರಲ್ಲಿ ಯಶಸ್ವಿಗಳಿಗೆ ಮಹತ್ವವಿದ್ದರೆ, ವಿಷಯನಿಷ್ಠರಾಜಪ್ರಜರಲ್ಲಿ ಮನಸ್ವಿಗಳಿಗೆ ಮಹತ್ವವಿರುತ್ತದೆ. ಧರ್ಮನಿಷ್ಠರಾಜಪ್ರಜರಲ್ಲಿ ಧರ್ಮಬಂಧನದ ನೆವದಿಂದ ವ್ಯಕ್ತಿಗಳ ಏಕೀಕರಣಕ್ಕೆ ಆಸ್ಪದವಿದ್ದರೆ, ವಿಷಯನಿಷ್ಠ ರಾಜಪ್ರಜರಲ್ಲಿ ವ್ಯಕ್ತಿ-ಸ್ವಾತಂತ್ರ್ಯದ, ಅರ್ಥಾತ್ ಸ್ವೈಚ್ಛಾಚಾರದ ನೆವದಿಂದ ವ್ಯಕ್ತಿಗಳ ಪೃಥಕ್ಕರಣಕ್ಕೆ ಆಸ್ಪದವುಂಟಾಗುತ್ತದೆ.

**ಸಂಬಂಧಗಳದೃಢತೆ-ಶಿಥಿಲತೆಗಳು**—ಮೇಲೆ ಧರ್ಮನಿಷ್ಠರ ಹಾಗು ವಿಷಯನಿಷ್ಠರ ಸ್ಥಿತಿಗತಿಗಳಲ್ಲಿಯ ವೈಲಕ್ಷಣ್ಯವ ಹೇಳಿದ್ದನ್ನು ವಿಚಾರಿಸಿದರೆ, ಧರ್ಮನಿಷ್ಠರ ಸ್ಥಿತಿಗತಿಗಳಲ್ಲಿ ದೃಢತೆಯೂ, ವಿಷಯನಿಷ್ಠರ

ಸ್ಥಿತಿಗತಿಗಳಲ್ಲಿ ಶಿಥಿಲತೆಯೂ ಇರುವವೆಂದು ಕಂಡುಬರುವದು; ಯಾಕಂದರೆ ಧರ್ಮನಿಷ್ಠರು ಧರ್ಮಬಂಧನದಿಂದ ಬಿಗಿದವರಾಗಿರುವದರಿಂದ ಧರ್ಮದ ಸ್ಥಿರತೆಯ ಮೂಲಕ ಅವರ ನಡತೆಯಲ್ಲಿ ಬಿಗುವು ಇರುತ್ತಿದೆ; ಆದರೆ ವಿಷಯನಿಷ್ಠರು ಅಂತಹ ಯಾವಬಂಧನಕ್ಕೂ ಒಳಗಾದವರಿರದೆ ಸ್ವೇಚ್ಛೆಯಿಂದ ವಿಷಯಸುಖದಲ್ಲಿ ಈಸುವವರಾದದ್ದರಿಂದ ವಿಷಯಗಳ ಚಾಂಚಲ್ಯದ ಮೂಲಕ ಅವರ ನಡತೆಯಲ್ಲಿ ಚಾಂಚಲ್ಯವು ಕಂಡುಬರುವದು. ಮನುಷ್ಯಪ್ರಾಣಿಯು ಕುಟುಂಬ, ಸಮಾಜ, ರಾಷ್ಟ್ರ ಎಂಬ ಸಂಕೇತಗಳಿಂದ ಒಟ್ಟುಗೂಡಿ ಪರಸ್ಪರ ಸಂಬಂಧಬಳಿಸಿ ಪರಿವಾರವನ್ನುಂಟುಮಾಡಿಕೊಂಡು ವಿಷಯಸೇವನ ಮಾಡುವನೆಂದು ಮೇಲೆ ಹೇಳಿದೆಯಷ್ಟೆ? ಧರ್ಮದಂತೆ ವಿಷಯಸೇವನ ಮಾಡುವದು ಮನುಷ್ಯನಿಗೆ ತಾರಕವೆಂತಲೂ, ಧರ್ಮದ ಮಿತಿಯನ್ನುಮೀರಿ ವಿಷಯಸೇವನ ಮಾಡುವದು ಮಾರಕವೆಂತಲೂ ಮೇಲೆಯೇ ಹೇಳಿರುತ್ತದೆ; ಆದ್ದರಿಂದ ಮನುಷ್ಯನು ತನ್ನ ಕೌಟುಂಬಿಕ, ಸಾಮಾಜಿಕ, ರಾಷ್ಟ್ರೀಯ ಸನಾತನ ಧರ್ಮಗಳನ್ನು ಪಾಲಿಸಿದರೆ ಆತನ ಆ ಸಂಬಂಧಗಳು ದೃಢವಾಗುವವು; ಹಾಗೆ ಧರ್ಮಪಾಲನಮಾಡದೆ ಮನಸ್ಸಿಗೆ ಬಂದಂತೆ ನಡೆದರೆ ಆತನ ಆ ಸಂಬಂಧಗಳು ಶಿಥಿಲವಾಗುವವು.

ಸಂಬಂಧಗಳ ಈ ಧೃಢತೆ—ಶಿಥಿಲತೆಗಳಿಗೆ ಕ್ರಮವಾಗಿ ಧರ್ಮರಾಜ ದುರ್ಯೋಧನರ ಉದಾಹರಣಗಳನ್ನು ಕೊಡಬಹುದು. ಧರ್ಮರಾಜನು ಕೇವಲ ಧರ್ಮಮೂರ್ತಿಯೆಂಬದರಲ್ಲಿ ಸಂಶಯವಿಲ್ಲ. ಹೀಗೆ ಈತನು ಧರ್ಮನಿಷ್ಠನಾದದ್ದರಿಂದಲೇ ತನ್ನ ಅಹಿ ಚಿಂತಕನಾದ, ಅಂದರೆ ತನ್ನ ಸಾಮ್ರಾಜ್ಯಸುಖಾನುಭವಕ್ಕೆ ಅಡ್ಡಬರುವ ಧೃತರಾಷ್ಟ್ರನೆಂಬ ತನ್ನ ದೊಡ್ಡಪ್ಪನ ಅಪ್ಪಣೆಯಂತೆ ಯಾವಾಗಲೂ ನಡೆದುಕೊಂಡು ಆಜ್ಞಾಪಾಲನ–ರೂಪವಾದ ತನ್ನ ಪುತ್ರಧರ್ಮವನ್ನು ಪಾಲಿಸಿ ತನ್ನ ಕೌಟುಂಬಿಕ ಬಂಧನವನ್ನು ದೃಢಪಡಿಸಿದನೆಂಬದು ಆದಿಪರ್ವ ಭಾರತಓದಿದವರಿಗೆ ಗೊತ್ತಾಗಿರಬಹುದು. ಇದಕ್ಕೆ ವಿರುದ್ಧವಾಗಿ ವಿಷಯಾಸಕ್ತನಾದ ದುರ್ಯೋಧನನು, ತನಗೆ ಹಿತೋಪದೇಶಮಾಡುವ ಪ್ರತ್ಯಕ್ಷ ತನ್ನತಂದೆ-ತಾಯಿಗಳಾದ ಧೃತರಾಷ್ಟ್ರ–ಗಾಂಧಾರಿಯರೊಡನೆಯೂ, ದ್ರೋಣ–ಭೀಷ್ಮಾದಿ ಗುರುಹಿರಿಯರೊಡನೆಯೂ, ಅವರು ತನ್ನ ಅನ್ಯಾಯದ ಸಾಮ್ರಾಜ್ಯಾಭಿವೃದ್ಧಿಯಕಾರ್ಯಕ್ಕೆ ಅಡ್ಡಬರು

ವರೆಂದು ಕಲ್ಪಿಸಿ, ಅವರೊಡನೆ ಶತ್ರುವಿನಂತೆ ನಡೆದುಕೊಂಡನು; ಅಂದರೆ ಅವರ ಅಪ್ಪಣೆಯನ್ನು ಮೀರಿ ತನ್ನ ಮನಸಿಗೆಬಂದಂತೆ ನಡೆದನು. ಒಟ್ಟಿಗೆ, ಧರ್ಮರಾಜನು ಧರ್ಮಿಷ್ಠನಾದದ್ದರಿಂದ ಹಿರಿಯರ ಅಪ್ಪಣೆಯನ್ನು ಮನ್ನಿಸಬೇಕೆಂಬ ಕೌಟುಂಬಿಕ ಧರ್ಮವನ್ನು ಪರಿಪೂರ್ಣವಾಗಿ ಪಾಲಿಸಿ, ತನ್ನ ರಕ್ತಸಂಬಂಧವನ್ನು ತನ್ನ ಪ್ರತಿಕೂಲ ಪರಿಸ್ಥಿತಿಯಲ್ಲಿಯೂ, ಅಂದರೆ ಹಸ್ತಿನಾವತಿಯನ್ನು ಬಿಟ್ಟು ವಾರಣಾವತನಗರಕ್ಕೆ ಹೋಗುವಾಗೂ ದೃಢವಾಗಿ ಕಾಯ್ದುಕೊಂಡನು. ಇದಕ್ಕೆ ವಿರುದ್ಧವಾಗಿ ವಿಷಯಾಸಕ್ತನಾದ ದುರ್ಯೋಧನನು, ತನ್ನ ಅನುಕೂಲ ಪರಿಸ್ಥಿತಿಯಲ್ಲಿಯೂ, ಅಂದರೆ ತಾನೇ ರಾಜನಾಗಿರುವಾಗೂ, ತನ್ನ ನೀಚಸ್ವಾರ್ಥಕ್ಕೆ ತನ್ನ ತಂದೆತಾಯಿ ಗುರು ಹಿರಿಯರು ಅಡ್ಡಬರುವರೆಂದು ತಿಳಿದು, ಧರ್ಮಾಧರ್ಮವಿಚಾರಮಾಡದೆ ಅವರ ಮಾತನ್ನು ಮೀರಿ ತನ್ನ ರಕ್ತಸಂಬಂಧಿಕರ ಸಂಬಂಧಗಳನ್ನು ಶಿಥಿಲಮಾಡಿಕೊಂಡನು.

ಹೀಗೆ ಸಂಬಂಧಗಳ ದೃಢೀಕರಣದ ವಿಷಯದಲ್ಲಿ ಧರ್ಮವು ಮುಪ್ಪುರಿಯ ಹಗ್ಗದಂತೆ ಇರುತ್ತದೆಂದು ತಿಳಿಯತಕ್ಕದ್ದು. ಮಹಾ ಬಲಿಷ್ಠನಾದ ಸಿಟ್ಟಿನ ಭೀಮಸೇನನೂ, ಮಹಾ ಪ್ರತಾಪಿಯಾದ ಅರ್ಜುನನೂ ಕೂಡ ಸಾಮ್ರಾಜ್ಯಸುಖದ ಕಡೆಗೆ ಹರಿದುಹೋಗುವ ತಮ್ಮ ಮನೋವೃತ್ತಿಗಳನ್ನು, ಧರ್ಮರಾಜನ ಧರ್ಮನಿಷ್ಠೆಯಲ್ಲಿ ದೃಷ್ಟಿಯನ್ನಿಟ್ಟು ತಾವೂ ಧರ್ಮಿಷ್ಠರಾಗಿ ನಡೆದು ತಮ್ಮ ರಕ್ತಸಂಬಂಧವನ್ನು ಶಿಥಿಲವಾಗಗೊಡದೆ ಮನೋನಿಗ್ರಹದಿಂದ ತಮ್ಮ ಬಾಂಧವ್ಯವನ್ನು ಕಾಯ್ದುಕೊಂಡರು. ಒಮ್ಮೆ ದ್ರೌಪದಿಯೂ, ಭೀಮನೂ(ಮುಂದೆ ವನಪರ್ವದ ೩೬ರಿಂದ೬೪ಪುಟಗಳಲ್ಲಿ ಹೇಳಿದಂತೆ)ಸಾಮ್ರಾಜ್ಯಸುಖಕ್ಕೆ ಮೋಹಿಸಿ ಕ್ರಮವಾಗಿ ತಮ್ಮ ಪತ್ನೀಧರ್ಮ, ಕನಿಷ್ಠ ಭ್ರಾತೃಧರ್ಮಗಳಿಗೆ ವಿರುದ್ಧವಾಗಿ ಧರ್ಮರಾಜನ ಧಾರ್ಮಿಕನಡತೆಯನ್ನು ತಿರಸ್ಕರಿಸಲು, ಧರ್ಮಮೂರ್ತಿಯಾದ ಧರ್ಮರಾಜನು ಧರ್ಮದ ಸ್ವರೂಪವನ್ನೂ, ಮಹತ್ವವನ್ನೂ ಸ್ಪಷ್ಟವಾಗಿ ನಿರೂಪಿಸಿ ದ್ರೌಪದಿಯ ನಾಸ್ತಿಕತನವನ್ನೂ, ಭೀಮನ ಎಟ್ಟಿತನವನ್ನೂ ದೂರಮಾಡಿ, ಸಂಬಂಧ ಶಿಥಿಲೀಕರಣಕಾರಣವಾದ ಅಧಾರ್ಮಿಕ ವಿಷಯಸೇವನದ ದುರ್ಬುದ್ಧಿಯನ್ನು ದೂರಮಾಡಲು, ಆ ಸಾಧ್ವಿಯೂ, ಆ ಭ್ರಾತೃಭಕ್ತನೂ ಪುನಃ ತಮ್ಮ ಪತ್ನೀ–ಭ್ರಾತೃಧರ್ಮ

ಗಳನ್ನು ಪಾಲಿಸಿ ತಮ್ಮ ರಕ್ತಸಂಬಂಧವನ್ನು ದೃಢಪಡಿಸಿಕೊಂಡರು. ಹೀಗೆ ಪಾಂಡವರು ತಮ್ಮ ರಕ್ತಸಂಬಂಧದಲ್ಲಿ ಶಿಥಿಲತೆಯುಂಟಾಗುವ ಪ್ರಸಂಗ ಒದಗಿದಾಗೆಲ್ಲ, ತಮ್ಮ ಧರ್ಮಬುದ್ಧಿಯನ್ನು ಜಾಗ್ರತಗೊಳಿಸಿಕೊಂಡೇ ತಮ್ಮ ರಕ್ತಸಂಬಂಧವನ್ನು ದೃಢಪಡಿಸಿಕೊಂಡು ಬಲಿಷ್ಠರಾದರು; ಇಂತಹ ದೃಢವಾದ ಧರ್ಮಬಂಧನವು ಕೌರವರಲ್ಲಿಲ್ಲದ್ದರಿಂದಲೇ ಅವರ ಸಂಬಂಧಗಳಲ್ಲಿ ಶೈಥಿಲ್ಯವುಂಟಾಗಿ ಅವರು ಕಸುವುಗೆಟ್ಟರು.

**ಮತಕೊಡಲು ಅಧಿಕಾರಿಗಳು**—ಮೇಲೆ ಧರ್ಮನಿಷ್ಠರ ಹಾಗು ವಿಷಯನಿಷ್ಠರ ಸ್ವರೂಪವೈಲಕ್ಷಣ್ಯವನ್ನೂ, ಸಂಬಂಧಗಳದೃಢತೆ–ಶಿಥಿಲತೆಗಳನ್ನೂ ಕುರಿತು ಹೇಳಿರುತ್ತದಷ್ಟೆ? ಅವನ್ನೆಲ್ಲ ಕುರಿತು ಆಲೋಚಿಸಿದರೆ, ಮತಕೊಡಲಿಕ್ಕೆ ವಿಷಯನಿಷ್ಠರಿಗಿಂತ ಧರ್ಮನಿಷ್ಠರು ತಕ್ಕವರೆಂಬ ಮಾತು ಮನಸ್ಸಿನಲ್ಲಿ ಬರಬಹುದು; ಯಾಕಂದರೆ ಧರ್ಮನಿಷ್ಠರು ಇಹಪರಹಿತಗಳೆರಡನ್ನೂ ಲಕ್ಷಿಸಿ ನಿಯಮಬದ್ಧರಾಗಿ ನಡೆಯುವವರಾದದ್ದರಿಂದ, ಅವರು ವಿಶಾಲದೃಷ್ಟಿಯವರೂ, ಚಾಂಚಲ್ಯರಹಿತರೂ, ಇಂದ್ರಿಯನಿಗ್ರಹಶೀಲರೂ ಆಗಿರುವರು; ಆದರೆ ವಿಷಯನಿಷ್ಠರು ಕೇವಲ ಐಹಿಕ ವಿಷಯಸುಖವನ್ನು ಲಕ್ಷಿಸಿ ಮನಸಿಗೆಬಂದಂತೆ ನಡೆಯುವವರಾದದ್ದರಿಂದ ಅವರು ಸಂಕುಚಿತ ದೃಷ್ಟಿಯವರೂ, ಚಂಚಲರೂ, ಇಂದ್ರಿಯಾಧೀನರೂ ಆಗಿರುವರು; ಒಟ್ಟಿಗೆ ಧರ್ಮನಿಷ್ಠರ ವಿಷಯಸುಖಭೋಗಕ್ಕೆ ಧರ್ಮದ ಪ್ರತಿಬಂಧವಿರುವದರಿಂದ, ಅವರಿಂದ ಪರಹಿತಕ್ಕೆ ಬಾಧೆತಟ್ಟಲು ಆಸ್ಪದವು ಕಡಿಮೆಯಿದ್ದು, ವಿಷಯನಿಷ್ಠರ ವಿಷಯಸುಖಭೋಗಕ್ಕೆಯಾತರ ಪ್ರತಿಬಂಧವೂ ಇಲ್ಲದ್ದರಿಂದ, ಅವರು ಕಾರಣಾಂತರದಿಂದ ಬಲಿಷ್ಠರಾದರೆ ಅವರಿಂದ ಪರಹಿತಕ್ಕೆ ಬಾಧೆಯುಂಟಾಗುವದು ನಿಶ್ಚಿತವಾಗಿರುವದು; ಆದರೆ ಕೇವಲ ಧರ್ಮನಿಷ್ಠರು, ಅಥವಾ ವಿಷಯನಿಷ್ಠರು ಆದಮಾತ್ರದಿಂದ ಮತಕೊಡಲು ಅಧಿಕಾರಿಗಳು ಆವರೆಂದು ತಿಳಿಯಲಾಗದು. ಯಾವದೊಂದು ಕಾರ್ಯಸಾಧನದ ವಿಷಯದಲ್ಲಿ, ಅಥವಾ ಲೋಕದಲ್ಲಿ ಯಾವದೊಂದು ಆಚಾರವನ್ನು ಬಳಿಕೆಯಲ್ಲಿ ತರುವವಿಷಯದಲ್ಲ ಮತಕೊಡಬೇಕಾದರೆ, ಮತಕೊಡುವವರಲ್ಲ ಪ್ರಾಮುಖ್ಯವಾಗಿ ತಜ್ಞತೆಯು, ಅಂದರೆ ಸಾಧಿಸತಕ್ಕ ಕಾರ್ಯದ ಸ್ವರೂಪಜ್ಞಾನವು, ಅಥವಾ ದೇಶ–ಕಾಲ–ಪರಿಸ್ಥಿತಿಗಳಿಗನುಸರಿಸಿ ಬಳಿಕೆಯಲ್ಲಿ ತರತಕ್ಕ ಆಚಾರಗಳ ನಿಜವಾದ ಹಿತಾಹಿತಪರಿ

ಣಾಮದ ಜ್ಞಾನವು ತಾತ್ವಿಕವಾಗಿ ಇರಬೇಕಾಗುವದು. ಇವೆರಡು ಸಂಗತಿಗಳಲ್ಲದೆ, ಮೇಲೆ ಧರ್ಮರಾಜನು ಶ್ರೀಕೃಷ್ಣನ ಮುಂದೆ ಹೇಳಿದಂತೆ ಯೋಗ್ಯಮತಕೊಡಲಿಕ್ಕೆ ತ್ರಿವಿಧ ಹೇತುಗಳಮೂಲಕ, ಅಂದರೆ ವಿನಯಶಾಲಿತ್ವ-ಸ್ವಾರ್ಥ—ಸೌಜನ್ಯಗಳಮೂಲಕ ಉಂಟಾಗುವ ಸ್ಪಷ್ಟವಾದಿತ್ವದ ಅಭಾವವು ಮತಕೊಡುವಾಗ ಬಾಧಕವಾಗಲಾಗದು; ಮತ್ತು ಮತಕೊಡುವವನು ಮಾನವೀ ಸ್ವಭಾವಕ್ಕನುಸರಿಸಿ ಕಾಮ-ಕ್ರೋಧ-ಮದ-ಮೋಹ-ಲೋಭ-ಮತ್ಸರಗಳೆಂಬ ಷಡ್ವಿಕಾರಗಳಿಗೆ ಒಳಗಾಗದವನೂ, ಜನರಲ್ಲಿ ಅತ್ಯಂತ ಉಚಿತವಾದ, ಅಂದರೆ ಜನಹಿತಕಾರಿಯಾದ ಸಂಗತಿಯನ್ನು ಲಕ್ಷಿಸುವವನೂ ಆಗಿರಬೇಕು. ಒಟ್ಟಿಗೆ—೧ ಧರ್ಮನಿಷ್ಠೆ. ೨ ತಜ್ಞತೆ. ೩ ಸ್ಪಷ್ಟವಾದಿತ್ವ. ೪ ವಿಕಾರರಹಿತತ್ವ. ೫ ಜನಹಿತದಕ್ಷತೆ ಎಂಬ ಐದು ಗುಣಗಳುಳ್ಳವನೇ ಮತಕೊಡಲು ಅಧಿಕಾರಿಯಾಗುವನೆಂದು ಧರ್ಮರಾಜನ ಅಭಿಪ್ರಾಯವಿರುವದು.

**ಈಗಿನ ಮತದಾರರ ವಿಲಕ್ಷಣತೆಯು**—ಮೇಲೆ ಹೇಳಿದ ಮತದಾರರ ಐದು ಗುಣಗಳು ಧರ್ಮರಾಜನ ಕಾಲದ ಮತದಾರರವಾಗಿರುವವು; ಆದರೆ ಧರ್ಮರಾಜನ ಕಾಲದ ಮತದಾರರಿಗೂ ಈಗಿನಕಾಲದ ಮತದಾರರಿಗೂ ಹೆಚ್ಚುಕಡಿಮೆಯಿರುವದು. ಧರ್ಮರಾಜನ ಕಾಲದ ರಾಜರು ರಾಜರಾಗಿಯೂ, ಪ್ರಜೆಗಳು ಪ್ರಜೆಗಳಾಗಿಯೂ ಇದ್ದು, ಆ ರಾಜಪ್ರಜರು ತಮ್ಮ ತಮ್ಮ ಧರ್ಮಗಳನ್ನು ಪಾಲಿಸುತ್ತ ಪರಸ್ಪರರು ವಿಶ್ವಾಸದಿಂದ ನಡೆದುಕೊಳ್ಳುತ್ತಿದ್ದರಾದ್ದರಿಂದ, ಅವರಲ್ಲಿ ಮಾತ್ಸರ್ಯದ ಉತ್ಪತ್ತಿಗೆ ಕಾರಣವಿದ್ದಿಲ್ಲ; ಆದರೆ ಈಗಿನ ವಿಷಯಾಸಕ್ತ ಕಾಲದಲ್ಲಿ ವ್ಯಕ್ತಿ-ಸ್ವಾತಂತ್ರ್ಯದ, ಅಂದರೆ ಸ್ವಚ್ಛಂದದ ಸುಖಭೋಗವೃತ್ತಿಯ ನೆವದಿಂದ ರಾಜಪ್ರಜರಲ್ಲಿ ಅವಿಶ್ವಾಸವು ಉತ್ಪನ್ನವಾಗಿರುವದು. ಪ್ರಜೆಗಳು, ತಮ್ಮಿಂದಲೇ ರಾಜನ ಅಸ್ತಿತ್ವವಿದ್ದು, ತಮ್ಮ ಸ್ವೇಚ್ಛೆಯ ಸುಖಾಭಿವೃದ್ಧಿಗೆ ರಾಜನ ಪ್ರತಿಬಂಧವಾದರೂ ಯಾತಕ್ಕೆಂದು ತಿಳಿದು, ರಾಜನಅಧಿಕಾರವನ್ನು ಕಡಿಮೆಮಾಡಲು, ಅಥವಾ ರಾಜನಕಾಟವನ್ನೇ ತಪ್ಪಿಸಿಕೊಳ್ಳಲು ಯತ್ನಿಸುವರೆಂದು ಮೇಲೆ ಯೊಂದುಕಡೆ ಹೇಳಿರುತ್ತದೆ; ಆದ್ದರಿಂದ ಈಗಿನ ಪ್ರಜೆಗಳು ತಮ್ಮವಿಷಯಾಸಕ್ತಿಯ ಹೇಸಿತನಕ್ಕೆಹೇಸದೆ, ನಿಸ್ಪೃಹಿಗಳಾದಮಹಾತ್ಮರಂತೆ ತಾವೇರಾಜರೂ, ತಾವೇ ಪ್ರಜೆಗಳೂ ಆಗಿ ತಮ್ಮನ್ನು

ತಾವೇ ಆಳಿಕೊಳ್ಳಬೇಕೆಂದು ಭಾವಿಸಿ, ತಮ್ಮ ಆ ಭಾವನೆಯಂತೆ ತಮ್ಮ ಬಹುಮತದ ಕಸುವಿನಿಂದ ರಾಜನ ಮುಂಗೈಹಿಡಿದು ತಮ್ಮ ಇಷ್ಟಾರ್ಥವನ್ನು ಪೂರ್ಣಮಾಡಿಕೊಳ್ಳುವರು; ಮತ್ತು ತಮ್ಮಮತಕೇಳದೆ ರಾಜಕಾರಣವಯಾವನುಹತ್ವದ ಕೆಲಸವನ್ನೂ ಮಾಡಲಾಗದೆಂದು ಅರಸನನ್ನು ನಿರ್ಬಂಧಿಸುವರು; ಅಂದರೆ ಪ್ರಜೆಗಳು ರಾಜನನ್ನು ಪರ್ಯಾಯದಿಂದ ಆಳಲು ಯತ್ನಿಸುನಾಗ ತಾವೇ ರಾಜರಾಗುವರು! ಇದರಿಂದ ಈಗಿನಪ್ರಜರಲ್ಲಿ ರಾಜಪ್ರಜರಿಬ್ಬರ ಸಂಕರವಾಗಿರುತ್ತದೆಂದು ತಿಳಿಯಬೇಕಾಗುವದು. ಮೇಲೆ ಧರ್ಮರಾಜನ ಕಾಲದ ಮತದಾರರಲ್ಲಿ ಇರಬೇಕಾದ ಗುಣಗಳು. ೧ ಧಾರ್ಮಿಕತೆ. ೨ ತಜ್ಞತೆ. ೩ ಸ್ಪಷ್ಟವಾದಿತ್ವ. ೪ ವಿಕಾರರಾಹಿತ್ಯ. ೫ ಜನಹಿತದೃಷ್ಟಿ ಎಂಬವು ಐದು ಇರುವವೆಂದು ಹೇಳಲಾಗಿದೆಯಷ್ಟೆ? ಆದರೆ ರಾಜಪ್ರಜೆಗಳಿಬ್ಬರ ಸಂಕರವುಳ್ಳ ಈಗಿನ ಮತದಾರರಲ್ಲಿ ಮೇಲಿನ ಐದು ಗುಣಗಳು ಇರಬೇಕಾಗುವವಲ್ಲದೆ, ಪ್ರಜಾವತ್ಸಲ ರಾಜನಲ್ಲಿರಬೇಕಾದ ಬೇರೆಗುಣಗಳೂ ಅವರಲ್ಲಿ ಇರಬೇಕಾಗುವವು; ಆದ್ದರಿಂದ ಪ್ರಜಾವತ್ಸಲರಾಜನ ಅಂಥ ಗುಣಗಳು ಯಾವವೆಂಬದನ್ನು ಕೆಳಗೆ ಹೇಳುವೆವು.

**ಪ್ರಜಾವತ್ಸಲರಾಜರ ಆಡಳಿತದಲ್ಲಿ ವ್ಯಕ್ತವಾಗಬೇಕಾದ ಗುಣಗಳು**—ಈ ಗುಣಗಳನ್ನು ಹಿಂದೆ ಈ ಸಭಾಪರ್ವದ ೨೬, ೨೭ನೇ ಪುಟಗಳಲ್ಲಿ ವೈಶಂಪಾಯನರು ಜನಮೇಜಯನ ಮುಂದೆ ಧರ್ಮರಾಜನ ಉತ್ತಮ ರಾಜ್ಯಪದ್ಧತಿಯನ್ನು ವರ್ಣಿಸುವಾಗ ಉಲ್ಲೇಖಿಸಿರುವರು. ವೈಶಂಪಾಯನರು ಜನಮೇಜಯರಾಜನಿಗೆ ಹೇಳಿದ್ದೇನಂದರೆ—“ ಜನಮೇಜಯಾ, ಪ್ರಜೆಗಳ ಕಲ್ಯಾಣದ ವಿಷಯದಲ್ಲಿಯೇ ಧರ್ಮರಾಜನ ಚಿತ್ತವು ತೊಡಗಿಹೋಗಿದ್ದು, ಪ್ರಜೆಗಳಿಗೆ ಹಿತವಾಗುವಂತಹ ಕಾರ್ಯವನ್ನೇ ಆತನು ಮಾಡುತ್ತಿದ್ದದ್ದರಿಂದ, ಯಾವತ್ತು ಪ್ರಜೆಗಳು ಆತನನ್ನು ಹಾಡಿಹರಿಸಿ, ತಂದೆಯಂತೆ ಆತನನ್ನು ಆದರಿಸುತ್ತಿದ್ದರು. ಸಂಪೂರ್ಣರಾಜ್ಯದಲ್ಲಿ ಆತನಿಗೆ ಶತ್ರುಗಳೇ ಇಲ್ಲದ್ದರಿಂದ ಆತನಿಗೆ ಅಜಾತಶತ್ರುವೆಂಬ ಹೆಸರು ಪ್ರಾಪ್ತವಾಯಿತು. ಆ ಪಂಚಪಾಂಡವರ ರಾಜ್ಯದ ಸುವ್ಯವಸ್ಥೆಯನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ. ೧ ಧರ್ಮರಾಜನ ಪ್ರಜಾವಾತ್ಸಲ್ಯ ೨ ಭೀಮನ ಪ್ರಜಾರಕ್ಷಣ ದಕ್ಷತೆ, ೩ ಸವ್ಯಸಾಚಿ ಅರ್ಜುನನ ಶತ್ರುಸಂಹಾರದ ವಿಷಯದ ವಿಲಕ್ಷಣಸಾಮರ್ಥ್ಯ ೪ ದೂರದರ್ಶಿ

ಯಾದ ಸಹದೇವನ ಧರ್ಮಶಾಸನ. ೫ ಸರ್ವರ ವಿಷಯದ ಸ್ವಾಭಾವಿಕವಾದ ನಕುಲನವಿನಯ ಎಂಬ ಈ ಐದು ವಿಶಿಷ್ಟಗುಣಗಳಿಂದ ರಾಷ್ಟ್ರದೊಳಗಿನ ಕಲಹದ ಬೀಜಗಳು ನಷ್ಟವಾದವು. ಪ್ರಜೆಗಳಿಗೆ ಅಂಜಿಕೆಯೆಂಬದು ಉಳಿಯಲೇ ಇಲ್ಲ. ಯಾವಾಗಲೂ ಅವರು ತಮ್ಮ ಕರ್ತವ್ಯಗಳನ್ನು ಉತ್ಸಾಹದಿಂದ ಮಾಡತೊಡಗಿದರು. ಮಳೆಬೆಳೆಗಳು ಸಮೃದ್ಧವಾದವು. ಇತ್ಯಾದಿ" ಈಅವತರಣದಲ್ಲಿ ನಮಗೆ ಬೇಕಾಗಿರುವ ಮುಖ್ಯ ವಿಷಯವೆಂದರೆ, ಪಂಚಪಾಂಡವರೊಬ್ಬೊಬ್ಬರಲ್ಲಿದ್ದ ಮೇಲೆ ಅಂಕೆಹಾಕಿ ತೋರಿಸಿರುವ ಒಂದೊಂದು ವಿಶೇಷಗುಣಗಳು. ಈ ಐದು ಗುಣಗಳುಳ್ಳ, ಅಥವಾ ಈ ಐದುಗುಣಗಳ ಆನುಕುಲ್ಯವುಳ್ಳರಾಜನೇ ರಾಜ್ಯವಾಳಲು ಯೋಗ್ಯನೆಂದು ವೈಶಂಪಾಯನರು ಹೇಳಿದ ಹಾಗಾಯಿತು. ಅಂದಬಳಿಕ ರಾಜಪ್ರಜರ ಸಂಕರವಾಗಿರುವ ಈಗಿನ ಪ್ರಜೆಗಳಲ್ಲಿ, ಮತದಾರ ಪ್ರಜೆಗಳೆಂಬ ದೃಷ್ಟಿಯಿಂದ ಈನೊದಲೆ ಹೇಳಿರುವ– ೧ ಧಾರ್ಮಿಕತೆ, ೨ ತಜ್ಞತೆ, ೩ ಸ್ಪಷ್ಟವಾದಿತ್ವ, ೪ ವಿಕಾರರಹಿತತ್ವ, ೫ ಜನಹಿತದೃಷ್ಟಿ ಎಂಬ ಪ್ರಜೆಗಳಲ್ಲಿಯ ಐದು ಗುಣಗಳು ಇರಬೇಕಾಗುವವಲ್ಲದೆ, ರಾಜನಿಯಾಮಕರೆಂಬ ದೃಷ್ಟಿಯಿಂದ ಈಗಿನ ಪ್ರಜೆಗಳಲ್ಲಿ ಮೇಲೆ ಪ್ರಜಾವತ್ಸಲರಾಜರಾದ ಪಾಂಡವರಲ್ಲಿದ್ದ— ೧ ಪ್ರಜಾವಾತ್ಸಲ್ಯ, ೨ ಪ್ರಜಾರಕ್ಷಣ ದಕ್ಷತೆ, ೩ ಶತ್ರುಸಂಹಾರಸಾಮರ್ಥ್ಯ, ೪ ಧರ್ಮಶಾಶನ, ೫ ವಿನಯ ಎಂಬ ಅರಸರಲ್ಲಿಯ ಐದು ಗುಣಗಳೂ ಇರಬೇಕಾದದ್ದರಿಂದ, ಈಗಿನ ಮತದಾರರಲ್ಲಿ ಒಟ್ಟಿಗೆ— ೧ ಧಾರ್ಮಿಕತೆ, ೨ ತಜ್ಞತೆ, ೩ ಸ್ಪಷ್ಟವಾದಿತ್ವ, ೪ ವಿಕಾರರಹಿತತ್ವ, ೫ ಜನಹಿತದೃಷ್ಟಿ, ೬ ಪ್ರಜಾವಾತ್ಸಲ್ಯ, ೭ ಪ್ರಜಾರಕ್ಷಣದಕ್ಷತೆ, ೮ ಶತ್ರುಸಂಹಾರಸಾಮರ್ಥ್ಯ, ೯ ಧರ್ಮಶಾಸನ, ೧೦ ವಿನಯ ಎಂಬ ಹತ್ತು ಗುಣಗಳು ಇರಬೇಕಾಗುವವು.

**ಮತಾಧಿಕಾರಿಯ ಗುಣಗಳ ಗೌರವ**—ಹೀಗೆ ಮತಕೊಡಲುಅಧಿಕಾರಿಯಾದವನ ಹತ್ತು ಗುಣಗಳನ್ನು ಮೇಲೆ ಹೇಳಿದೆಯಷ್ಟೆ? ಈಹತ್ತು ಗುಣಗಳುಳ್ಳ ಶ್ರೀಕೃಷ್ಣನಂಥ ಮತದಾರರು ಜಗತ್ತಿನಲ್ಲಿ ದುರ್ಮಿಲರೆಂದು ತಿಳಿಯತಕ್ಕದ್ದು. ಆದರೂ ಮತದಾರರಲ್ಲಿ ಈ ಹತ್ತು ಗುಣಗಳುಳ್ಳವರ ಸಮಾವೇಶವಾದರೂ ಎಷ್ಟೋ ಹಿತವಾಗುವದು. ಮತಕೊಡಲು ಅಧಿಕಾರಿಗಳಾದ ಈಗಿ

ನವರಲ್ಲಿರಬೇಕಾದ ಈ ಹತ್ತು ಗುಣಗಳು ಉತ್ತರೋತ್ತರ ಹೆಚ್ಚು ಹೆಚ್ಚು ಗೌರವದವೂ, ದುರ್ಲಭಗಳೂ ಆಗಿರುವವೆಂದು ತಿಳಿಯತಕ್ಕದ್ದು. ಧರ್ಮನಿಷ್ಠೆಯು ಸಾಧಿಸತಕ್ಕ ಕಾರ್ಯರೂಪ ಮಂದಿರಕ್ಕೆ ಅಸ್ತಿವಾರದಂತೆಯೂ, ತಜ್ಞತೆಯು ಪ್ರತ್ಯಕ್ಷ ಮಂದಿರರೂಪವಾಗಿಯೂ, ಸ್ಪಷ್ಟವಾದಿತ್ವವು ಆಕಾರ್ಯರೂಪಮಂದಿರದ ಸುವ್ಯವಸ್ಥಿತ ಅಂಗೋಪಾಂಗರೂಪವಾಗಿಯೂ, ವಿಕಾರರಹಿತತೆಯು ಮಂದಿರದ ಸ್ವಚ್ಛತೆಯಂತೆಯೂ, ಲೋಕಹಿತದಕ್ಷತೆಯು ಮಂದಿರದ ಸೌಂದರ್ಯದಂತೆಯೂ, ಮುಂದಿನ ಐದು ಗುಣಗಳು ಮಂದಿರದಲ್ಲಿಯ ಯೋಗ್ಯ ವ್ಯವಹಾರಗಳಂತೆಯೂ ಇರುವವು. ಮೊದಲು ಧರ್ಮನಿಷ್ಠರು, ಅಂದರೆ ಸ್ವಧರ್ಮನಿಷ್ಠೆ-ಪರಧರ್ಮಸಹಿಷ್ಣುತೆಗಳುಳ್ಳವರು ಕಡಿಮೆ; ಯಾಕಂದರೆ ಧರ್ಮನಿಷ್ಠರಲ್ಲಿ ಪ್ರಾಮುಖ್ಯವಾಗಿ ವಿವೇಕಶಾಲಿತ್ವವೂ, ನಿಗ್ರಹಶಕ್ತಿಯೂ ಇರಬೇಕಾಗುವವು. ಈ ನಿಜವಾದ ಧರ್ಮನಿಷ್ಠರಿಗಿಂತ ತಜ್ಞರು ದುರ್ಲಭರು; ಯಾಕಂದರೆ ತಜ್ಞತೆಯು ಪೂರ್ವಜನ್ಮದ ಪ್ರಬಲಪುಣ್ಯದ ಫಲವಾಗಿರುವದು. ಈ ತಜ್ಞತೆಗಿಂತಲೂ ಸ್ಪಷ್ಟವಾದಿತ್ವವು ದುರ್ಲಭವಾಗಿರುವದು; ಯಾಕಂದರೆ ಸ್ಪಷ್ಟವಾದಿತ್ವಕ್ಕೆ ನಿಸ್ಪೃಹತೆಯ ಫಲವೆನಿಸುವ ನಿಶ್ಚಲನೈತಿಕ ಧೈರ್ಯವು ಬೇಕಾಗುವದು. ಸ್ಪಷ್ಟವಾದಿತ್ವಕ್ಕಿಂತವಿಕಾರರಾಹಿತ್ಯವುದುರ್ಲಭವಾಗಿರುವದು; ಯಾಕಂದರೆ ವಿಕಾರಗಳು ಹುಟ್ಟುಗುಣಗಳಾಗಿ ಉಳ್ಳ ಮನುಷ್ಯಪ್ರಾಣಿಯು, ತನ್ನ ಆ ಹುಟ್ಟುಗುಣಗಳು ಹುಗಿದರೂ ಹೋಗದಷ್ಟು ದೃಢವಾಗಿರಲು, ಆ ವಿಕಾರಗಳು ಸೌಮ್ಯವಾಗುವದಕ್ಕಾಗಿ ಈಶ್ವರಾನುಗ್ರಹದಿಂದ ಆತನು ಆತ್ಮಸಂಯಮಿಯಾಗಬೇಕಾಗುವದು. ವಿಕಾರರಾಹಿತ್ಯಕ್ಕಿಂತಲೂ ನಿಜವಾದ ಲೋಕಹಿತಬುದ್ಧಿಯು ದುರ್ಲಭವಾಗಿರುವದು; ಯಾಕಂದರೆ ಸತ್ಸಮಾಗಮದಿಂದ ಸತ್ಯಜ್ಞಾನವನ್ನು ಸಂಪಾದಿಸಿ ವೈರಾಗ್ಯದಿಂದ ಸತ್ಪುರುಷತ್ವವನ್ನು ಪಡೆದ ಹೊರತು ನಿಜವಾದ ಲೋಕಹಿತಬುದ್ಧಿಯು ಉಂಟಾಗುವದಿಲ್ಲ. ಅದರಂತೆ ಪ್ರಜಾವತ್ಸಲ ರಾಜರಲ್ಲಿಯ ವಾತ್ಸಲ್ಯಾದಿ ಐದು ಗುಣಗಳು ಉತ್ಕಟಪುಣ್ಯಪ್ರಭಾವದ ದೈವೀತೇಜಸ್ಸಿನ ವಿಷ್ಣ್ವಂಶವಿದ್ದ ಹೊರತು ಪ್ರಾಪ್ತವಾಗಲಾರವು.

**ವಿವೇಕಿಲೋಕಮತವೂ, ಅವಿವೇಕಿಲೋಕಮತವೂ**—ಹೀಗೆ ಮತದಾರರ ಒಂದೊಂದು ಲಕ್ಷಣಗಳು ದುರ್ಲಭಗಳೂ, ಉತ್ತರೋತ್ತರ ಹೆಚ್ಚು ಹೆಚ್ಚು ಗೌರವದವೂ ಆಗಿದ್ದರೂ, ಅವೆಲ್ಲ ಧರ್ಮಮೂಲವಾ

ಗಿರದಿದ್ದರೆ ಅವಕ್ಕೆ ಸ್ಥೈರ್ಯವೂ, ಪರಿಶುದ್ಧತೆಯೂ ಬರಲಾರವು; ಯಾಕಂದರೆ ತಳಸೋಸದೆ ಕಟ್ಟಿದ ಮನೆಯು ಕಡಕೊಂಡು ಬೀಳುವದು ನಿಶ್ಚಯವಾಗಿರುವದರಿಂಪ, ಮನೆಯು ಎಷ್ಟು ಪ್ರಶಸ್ತವಾಗಿದ್ದರೂ, ಎಂತಹ ಅನುಕೂಲತೆಗಳುಳ್ಳದ್ದಾಗಿದ್ದರೂ, ಎಷ್ಟು ಸ್ವಚ್ಛವಿದ್ದರೂ, ಎಷ್ಟು ಸುಂದರವಿದ್ದರೂ, ಅದರಲ್ಲಿ ಎಂತಹ ಗೌರವದ ಕಾರ್ಯಗಳು ನಡೆಯುತ್ತಿದ್ದರೂ ವ್ಯರ್ಥವಾಗುವಂತೆ, ಧರ್ಮಹೀನ ಮನುಷ್ಯನ, ಅಂದರೆ ಸ್ವಚ್ಛಂದವೃತ್ತಿಯ ಮನುಷ್ಯನ ಗುಣಗಳೆಲ್ಲ ನಿಜವಾದ ಜನಹಿತದೃಷ್ಟಿಯಿಂದ ವ್ಯರ್ಥವಾಗಿರುವವು. ಒಟ್ಟಿಗೆ, ವಿವೇಕವೇ ಮೂಲವಾಗಿರುವ ಧರ್ಮದಲ್ಲಿ ನಿಷ್ಠೆಯು ಹೆಚ್ಚು ಇದ್ದಮಾನದಿಂದ ಮನುಷ್ಯನಲ್ಲಿ ವಿವೇಕವೂ, ಅವಿವೇಕವೇ ಮೂಲವಾಗಿರುವ ಸ್ವೇಚ್ಛಾಚಾರವು ಹೆಚ್ಚು ಇದ್ದಮಾನದಿಂದ ಮನುಷ್ಯನಲ್ಲಿ ಅವಿವೇಕವೂ ಹೆಚ್ಚುವನೆಂದು ತಿಳಿಯಬೇಕು. ಸ್ವಹಿತಸಾಧನಪೂರ್ವಕ ಪರಹಿತಸಾಧನವು, ಅಂದರೆ ಧರ್ಮಾನುಸರಣವು ಮನುಷ್ಯತ್ವದಲಕ್ಷಣವಾಗಿದ್ದು, ಮನುಷ್ಯರೆನಿಸಿಕೊಳ್ಳಲಿಕ್ಕೆ ಬೇಕಾಗುವಷ್ಟಾದರೂ ಧರ್ಮಬುದ್ಧಿಯುಳ್ಳವರು ವಿವೇಕಿಗಳಾಗಿರುವರು. ಆದರೆ ಮನುಷ್ಯರಲ್ಲಿ ಗಣಿಸಲಿಕ್ಕೆ ಬಾರದಷ್ಟು ಸ್ವೇಚ್ಛಾಚಾರವುಳ್ಳವರು ಪಶುಕೋಟಿಯವರು, ಅರ್ಥಾತ್ ವಿವೇಕಜ್ಞಾನಹೀನರು ಆಗಿರುವದದರಿಂದ, ಅಂಥವರು ಅವಿವೇಕಿಗಳು ಆಗಿರುವರು; ಆದ್ದರಿಂದ ವಿವೇಕಿಗಳು, ಅಂದರೆ ಅಧಿಕಾರಸಂಪನ್ನಧರ್ಮನಿಷ್ಠರು ಕೊಡುವಮತವು ಸ್ಥಿರತೆಯ ಧರ್ಮಮೂಲವು, ಅಂತೇದೂರದೃಷ್ಟಿಯದು ಆಗಿರುವದರಿಂದ, ಅಂತಹ ಲೋಕಮತವನ್ನು ವಿವೇಕಿಲೋಕಮತವೆಂತಲೂ, ಅವಿವೇಕಿಗಳು, ಅಂದರೆ ಚಂಚಲರಾದ ವಿಷಯನಿಷ್ಠರು ಕೊಡುವಮತವು ಚಾಂಚಲ್ಯದ ವಿಷಯಸುಖಮೂಲವು, ಅಂತೇ ಅದೂರದೃಷ್ಟಿಯದು ಆಗಿರುವದರಿಂದ, ಅಂತಹಲೋಕಮತವನ್ನು ಅವಿವೇಕಿಲೋಕಮತವೆಂತಲೂ ಕರೆಯತಕ್ಕದ್ದು.

**ಅವಿವೇಕಿ ಲೋಕಮತವು ಅನರ್ಥಕಾರಿಯು**—ಮೇಲೆ ಹೇಳಿರುವ ವಿಷಯಗಳನ್ನೆಲ್ಲ ಶಾಂತಮನಸ್ಸಿನಿಂದ ಮರ್ಮವರಿತು ಓದಿ ಮನನಮಾಡಿದವರಿಗೆ, ಮುಂದಿನ ನಮ್ಮ ಸಿದ್ಧಾಂತಸ್ಥಾಪನೆಯ ಸತ್ಯತೆಯು ತಟ್ಟನೆ ಮನಸ್ಸಿನಲ್ಲಿ ಬರಬಹುದು. ಧರ್ಮಾಧರ್ಮ ವಿವೇಕದಿಂದ ವಿಷಯಸೇವನ ಮಾಡುವದು ಮನುಷ್ಯತ್ವದ ಲಕ್ಷಣವೆಂತಲೂ, ಧರ್ಮಾಧರ್ಮವಿವೇ

ಕವಿಲ್ಲದೆ ವಿಷಯಸೇವನಮಾಡುವದು, ಅರ್ಥಾತ್ ಸ್ವೇಚ್ಛಾಚಾರಿಗಳಾಗುವದು ಪಶುತ್ವದ ಲಕ್ಷಣವೆಂತಲೂ ಮೇಲೆ ಹೇಳಿರುತ್ತದಷ್ಟೇ? ಧರ್ಮಾಧರ್ಮವಿವೇಕಿಗಳು ಈಶ್ವರೀಭಯ, ಪಾಪಪುಣ್ಯಗಳಭಯ, ಲೋಕಲಜ್ಜಾಭಯ ಇವುಗಳಿಂದ ಪರಪೀಡೆಗೆ ಅಂಜಿ, ತಮ್ಮತಮ್ಮ ಮರ್ಯಾದೆಯಲ್ಲಿ ತಾವು ವ್ಯವಹರಿಸುವರು; ಆದರೆ ಸ್ವೇಚ್ಛಾಚಾರಿಗಳು ಇದಾವಭಯಕ್ಕೂ ಒಳಗಾಗದೆ ತಮ್ಮ ವಿವೇಕಹೀನವಾದ ಘಾತಕ ವಿಷಯಸುಖವೃದ್ಧಿಗಾಗಿ, ಅವಿವೇಕಮೂಲವಾದ ವ್ಯಕ್ತಿಹಿತ, ಸಾಮಾಜಿಕಹಿತ, ರಾಷ್ಟ್ರೀಯಹಿತ ಮೊದಲಾದ ಯಾವದೊಂದು ನೆವದಿಂದ ಒಟ್ಟುಗೂಡಿ ಬಹುಮತದ ಬಲದಿಂದ ಮತ್ತರಾಗಿ ಎರಡನೆಯವರ ಹಕ್ಕು ಬಾಬುಗಳಿಗೂ, ಸುಖಕ್ಕೂ ದಾಳಿಯಿಡಲು, ಅನರ್ಥವುಂಟಾಗುವದು; ಯಾಕಂದರೆ ಜಗತ್ತಿನಲ್ಲಿ ಸೃಷ್ಟಿನಿಯಮಸಮ್ಮತವಾಗಿ ಮನುಷ್ಯರು ಮನುಷ್ಯರಾಗಿಯೂ, ಪಶುಗಳು ಪಶುಗಳಾಗಿಯೂ ನಡೆಯುವದರಿಂದ ಜಗತ್ತಿಗೆ ಸುಖ-ಶಾಂತಿಗಳು ಉಂಟಾಗುವವಲ್ಲದೆ, ಮನುಷ್ಯತ್ವದಲ್ಲಿ ಪಶುತ್ವದ ಬೆರಿಕೆಯಾದರೆ, ಜಗತ್ತಿಗೆ ತಾಪವುಂಟಾಗುವದು ನಿಶ್ಚಯವು. ಹಚ್ಚಗಿದ್ದಲ್ಲಿ ಮೇದು ಬೆಚ್ಚಗಿದ್ದಲ್ಲಿ ಮಲಗುವದು, ಅಂದರೆ ಸ್ವೇಚ್ಛಾಚಾರವು, ಅಥವಾ ವ್ಯಕ್ತಿಸ್ವಾತಂತ್ರ್ಯವೆಂಬ ಹೆಸರಿನ ಘಾತಕಸ್ವಾತಂತ್ರ್ಯವು, ಅಥವಾ ಧರ್ಮಾಧರ್ಮವಿವೇಕಹೀನತೆಯು ಪಶುತ್ವದ ಲಕ್ಷಣವಾಗಿದ್ದರೂ, ಪಶುಗಳ ಆ ಸ್ವೇಚ್ಛಾಚಾರವು, ಅವುಗಳ ಅವಯವರಚನೆಯ ಕೊರತೆಯು, ಹಾಗು ಅವುಗಳ ಜ್ಞಾನವಿಹೀನತೆಯ ಮೂಲಕ ಜಗತ್ತಿಗೆ ಅವುಗಳಿಂದ ಅಮರ್ಯಾದಿತ ತಾಪವುಂಟಾಗುವ ಸಂಭವವಿಲ್ಲವು; ಆದರೆ ಅವಯವಗಳ ಪೂರ್ಣತೆಯೂ, ಜ್ಞಾನಸಂಪನ್ನತೆಯೂ ಉಳ್ಳಮನುಷ್ಯನು, ಧರ್ಮಾಧರ್ಮವಿವೇಕಹೀನನಾಗಿ ಸ್ವೇಚ್ಛಾಚಾರಿಯು ಆದರೆ, ಅಂದರೆ ಪಶುತ್ವತಾಳಿದರೆ, ಹಿರಣ್ಯಕಶಿಪು ಎಂಬ ದೈತ್ಯನ ಸಂಹಾರಕ್ಕಾಗಿ ಮನುಷ್ಯತ್ವ-ಪಶುತ್ವಗಳ ಮಿಶ್ರಣದ ಉಗ್ರನರಸಿಂಹರೂಪದಿಂದ ಅವತಾರತಾಳಿದ ಜಗದ್ರಕ್ಷಕ ಮಹಾವಿಷ್ಣುವಿನಿಂದಲೂ ಜಗತ್ತಿಗೆ ತಾಪವಾದಂತೆ, ಪಶುತ್ವತಾಳಿದ ಮನುಷ್ಯನಿಂದ, ಅಂದರೆ ಧರ್ಮಹೀನಮನುಷ್ಯನಿಂದ ನಿಶ್ಚಯವಾಗಿ ಜಗತ್ತಿಗೆ ತಾಪವಾಗುವದು. ಇಂಥ ನರಸಿಂಹರೇ ಲೋಕದಲ್ಲಿ ಹೆಚ್ಚಿ, ಅವರ ಮತಕ್ಕೆ ಆಸ್ಪದವುಂಟಾಗಲು, ಅಂತಹ ಅವಿವೇಕಿಲೋಕಮತದಿಂದ ಅನರ್ಥ

ನಾಗದೆ ಹೇಗೆ ಇದ್ದೀತು? ಈ ನರಪಶುತ್ವದಿಂದ ನೀಚಸ್ವಾರ್ಥಪರತೆಯು ಹೆಚ್ಚುವದರಿಂದ, ನಾವು ಮೇಲೆಹೇಳಿರುವ ಜಗತ್ತಿನ ಪ್ರೇಮ-ದ್ವೇಷರೂಪ ಸಂಬಂಧಗಳೆರಡರಲ್ಲಿ ಪರಸ್ಪರ ಪ್ರೇಮಸಂಬಂಧವು ಕಡಿಮೆಯಾಗಿ, ಪರಸ್ಪರ ದ್ವೇಷಸಂಬಂಧವು ಹೆಚ್ಚುವದು; ಮತ್ತು ಕೌಟುಂಬಿಕ-ಸಾಮಾಜಿಕ-ರಾಷ್ಟ್ರೀಯ ಸಂಬಂಧಗಳು ಚಂಚಲಗಳಾದ ವಿಷಯಸುಖಪ್ರಾಪ್ತಿಹೇತುಭೂತಗಳಾಗುವದರಿಂದ ಶಿಥಿಲಗಳಾಗುವವು; ಕಡೆಗೆ ವಿಷಯದ ನಂಜು ತಲೆಗೇರಿ ಜಗತ್ತಿಗೆ ನಾಶದ ಪ್ರಸಂಗವೂ ಒದಗಬಹುದು.

ಈಮಾತನ್ನು ನಾವು ನೃಸಿಂಹಾವತಾರದ ಕೃತಿಯನ್ನೇ ಸ್ಪಷ್ಟೀಕರಿಸಿ ಸ್ಥಿರಪಡಿಸುವೆವು. ಮನುಷ್ಯನ ಅಹಂಕಾರ-ಮಮಕಾರದೋಷಗಳೇ ದುಃಖೈಕಕಾರಣವೆಂದು ಮೇಲೆ ಹೇಳಿರುತ್ತದೆ; ಅದರಂತೆ ಜಗದ್ರಕ್ಷಕನಾದ ಮಹಾವಿಷ್ಣುವು ಪ್ರಹ್ಲಾದನಮೇಲಿನ ಭಕ್ತವಾತ್ಸಲ್ಯದೋಷದ, ಅಂದರೆ ನನ್ನ ಭಕ್ತನೆಂಬ ಮಮಕಾರದೋಷದ ಮೂಲಕ ಹಿರಣ್ಯಕಶಿಪುವಿನಮೇಲಿನ ದ್ವೇಷಾಗ್ನಿಯಿಂದ ಧಗಧಗಿಸಿ ಉರಿಯುತ್ತ, ನೃಸಿಂಹರೂಪದಿಂದ ಪ್ರಕಟನಾಗಿ, **“ಯೇಪ್ಯನ್ಯ-ದೇವತಾ ಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ। ತೇಪಿಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಂ॥”** ಎಂಬ ಗೀತೆಯ ತನ್ನ ಉಕ್ತಿಯಂತೆ, ಶಿವಭಕ್ತನಾದ ಹಿರಣ್ಯಕಶಿಪುವೂ ಅಪ್ರತ್ಯಕ್ಷವಾಗಿ ತನ್ನ ಭಕ್ತನೇ ಎಂಬದನ್ನು ಲಕ್ಷಿಸದೆ, ಆತನ ಜಗತ್ಕಂಟಕತನವನ್ನಷ್ಟು ಲಕ್ಷಿಸಿ ತನ್ನ ನರಪಶುಸ್ವಭಾವವಂತೆ ಆ ಹಿರಣ್ಯಕಶಿಪುವಿನ ಹೊಟ್ಟೆಬಗಿದು ಆತನ ರಕ್ತಪಾನಮಾಡಿ ಕರಳಮಾಲೆಯನ್ನು ಕೊರಳಲ್ಲಿಧರಿಸಿ, ಅಷ್ಟಕ್ಕೇ ನಿಲ್ಲದೆ, ತನ್ನ ಉಗ್ರರೂಪ-ಕೃತಿಗಳಿಂದ ಜಗತ್ತಿಗೇ ತಲ್ಲಣವನ್ನುಂಟುಮಾಡಿದನು! ಹೀಗೆ ಜಗತ್ತೇ ತಾಪಗೊಳ್ಳಲು, ಆ ಭಗವಂತನಾದ ನೃಸಿಂಹನು ಶಾಂತನಾಗಬೇಕೆಂದು ಆತನ ಹೆಂಡತಿಯಾದ ಮಹಾಲಕ್ಷ್ಮಿಯೂ, ಮಗನಾದ ಬ್ರಹ್ಮದೇವನೂ, ಮಿತ್ರನಾದ ಶ್ರೀಶಂಕರನೂ, ಕಿಂಕರರಾದ ಉಳಿದ ದೇವಸಮಾಜವೂ, ಬಹಳವೇಕೆ, ಜಗದ್ರೂಪವಾದ ಸಮಸ್ತರಾಷ್ಟ್ರವೂ ನರಸಿಂಹನನ್ನು ಶಾಂತನಾಗೆಂದು ಎಷ್ಟುಪ್ರಾರ್ಥಿಸಿದರೂ, ಕ್ರೂರರೂಪಶಾಳಿದ್ದರಿಂದ ಆಜಗದ್ರಕ್ಷಕ ಮಹಾವಿಷ್ಣುವುಕೂಡ ತನ್ನ ಕುಟುಂಬದವರ, ತನ್ನ ದೇವಸಮಾಜದವರ, ತನ್ನ ಜಗದ್ರಾಷ್ಟ್ರದವರ ಸಂಬಂಧವನ್ನು ಲಕ್ಷಿಸದೆ, ಅಂದರೆ

ತನ್ನ ರಕ್ತಪಾನರೂಪವಿಷಯವಿಷದ ನಂಜುತಲೆಗೇರಿದ್ದರಿಂದ, ತನ್ನ ಕೌಟುಂಬಿಕ–ಸಾಮಾಜಿಕ–ರಾಷ್ಟ್ರೀಯ ಸಂಬಂಧಗಳನ್ನು ಶಿಥಿಲಮಾಡಿಕೊಂಡು ತನ್ನ ನರ–ಪಶುರೂಪದ ಸ್ವಭಾವದಂತೆ ದಯಾ–ಮಾಯಾರಹಿತನಾಗಿ ಜಗತ್ತಿಗೆ ತಾಪವನ್ನೇ ಕೊಡಹತ್ತಿದನು! ಆಗ ಶ್ರೀನರಸಿಂಹನ ಅಪರರೂಪವೇ ಆದ ಶ್ರೀಶಂಕರನು ಜಗತ್ಕಲ್ಯಾಣಕ್ಕಾಗಿ ಶರಭಾವತಾರತಾಳಿ, ಭೃಗುಋಷಿಯ ಶಾಪದಿಂದ ತನ್ನ ಭಕ್ತವಾತ್ಸಲ್ಯದೋಷದ ಮೂಲಕವಾಗಿಯೇ ಅಜ್ಞಾನಾವೃತನಾಗಿದ್ದ ನರಸಿಂಹನ ಉಗ್ರರೂಪವನ್ನು ಅಡಗಿಸಬೇಕಾಯಿತೆಂದು ಶೈವ ಪುರಾಣಗಳೂ, ಭಕ್ತಶ್ರೇಷ್ಠನಾದ, ಅರ್ಥಾತ್ ನರಸಿಂಹನ ಅಂಶವೇ ಆದ ಪ್ರಹ್ಲಾದನು, ತನ್ನ ಅನನ್ಯಭಕ್ತಿಯ ಯೋಗದಿಂದ ಭಕ್ತಾಧೀನನಾದ ನರಸಿಂಹನ ಉಗ್ರರೂಪವನ್ನು ಅಡಗಿಸಿ ಆತನನ್ನು ಪ್ರಸನ್ನನರಸಿಂಹನಾಗಮಾಡಿದನೆಂದು ವೈಷ್ಣವ ಪುರಾಣಗಳೂ ಹೇಳುವವು.

ಒಟ್ಟಿಗೆ, ಮನುಷ್ಯತ್ವ--ಪಶುತ್ವಗಳ ಬೆರಿಕೆಯು, ಅಥವಾ ಮನುಷ್ಯನು ಪಶುವಾಗುವದು, ಅಥವಾ ಅಧಾರ್ಮಿಕನಾಗುವದು ಜಗತ್ತಿಗೆ ಸರ್ವಥಾ ಕ್ಷೇಮಕರವಾಗದೆ, ಉತ್ತರೋತ್ತರ ಅನರ್ಥಕಾರಿಯಾಗುವದೆಂಬದು ನಿಶ್ಚಯವು; ಆದ್ದರಿಂದಲೇ ನಾವು ಧರ್ಮರಾಜನ ಉಕ್ತಿಯ ಹೊಯ್ಲುನೋಡಿ, ಈಗಿನಕಾಲದ ಅವಿವೇಕಿಮತದಾರರ ದುರ್ಲಕ್ಷಣಗಳನ್ನು ಲಕ್ಷಿಸಿ,"ಅವಿವೇಕಿಲೋಕಮತವು ಅನರ್ಥಕಾರಿಯೆಂ"ದು ಹೇಳಿದೆವು! ಈಅನರ್ಥವುತಪ್ಪಬೇಕಾದರೆ ಮತಕೇಳುವವರಾಗಲಿ, ಮತಕೊಡಲು ಕಳಿಸುವವರಾಗಲಿ ಮತಾಧಿಕಾರಿಗಳಲ್ಲಿರಬೇಕಾದ ಮೇಲೆಹೇಳಿದ ಹತ್ತುಗುಣಗಳಲ್ಲಿ, ಪ್ರಾಮುಖ್ಯವಾಗಿ ೧ ಧಾರ್ಮಿಕತೆ. ೨ ತಜ್ಞತೆ. ೩ ನಿಸ್ಪೃಹವೃತ್ತಿ. ೪ ವಿಕಾರರಾಹಿತ್ಯ. ೫ ಲೋಕಹಿತಬುದ್ಧಿ ಈ ಗುಣಗಳುಳ್ಳವರನ್ನು, ಅಥವಾ ಕಿಮಾನಪಕ್ಷ ಧಾರ್ಮಿಕತೆ--ತಜ್ಞತೆಗಳುಳ್ಳವರನ್ನು, ಬುದ್ಧಿಪೂರ್ವಕ ಆರಿಸಬೇಕು; ಮತ್ತು ಮತಕೊಡಲು ಅಧಿಕಾರಿಯಾದವನಲ್ಲಿರಬೇಕಾದ ಉಳಿದ ಎಂಟುಗುಣಗಳುಳ್ಳವರ ಸಮಾವೇಶವು ಮತದಾರರ ಹಿಂಡಿನಲ್ಲಿ ಆಗುವಂತೆ ನೋಡಿಕೊಳ್ಳಬೇಕು. ಹಾಗೆ ಮಾಡದೆ, ಜಾತಿ, ಉದ್ಯೋಗ, ಪಂಗಡ, ಸ್ತ್ರೀವರ್ಗ, ಪುರುಷವರ್ಗ, ಶ್ರೀಮಂತವರ್ಗ, ಬಡವರವರ್ಗ, ಹುಡುಗರವರ್ಗ, ಮುದುಕರವರ್ಗ, ತರುಣರವರ್ಗ, ಹುಚ್ಚರವರ್ಗ, ರೋಗಿಗಳವರ್ಗ, ದುಷ್ಟರವರ್ಗ, ಶಿಷ್ಟರವರ್ಗ

ಇತ್ಯಾದಿ ಇತ್ಯಾದಿ ವಿವಿಧವರ್ಗಗಳಿಗೆಲ್ಲ, ಅಂದರೆ ಒಟ್ಟಿನಲ್ಲಿ ದೇಶದಜನರಿಗೆಲ್ಲ ಮತಾಧಿಕಾರವಿರುವದೆಂಬ ಘಾತಕವಿಚಾರಕ್ಕೆ ಬಿದ್ದು, ಜಗತ್ತಿನನಾಶದ ಪ್ರಸಂಗಕ್ಕೆ ಉತ್ತೇಜನಕೊಡಬಾರದು. ಅಥವಾ ಯಾರು ಮಾಡುವದೇನು? ಕಾಲಮಹಿಮೆಯಿಂದ ಎಲ್ಲ ಧರ್ಮಗಳಿಗೂ ಗ್ಲಾನಿಯುಂಟಾಗಿ, ಮನುಷ್ಯವರ್ಗಕ್ಕೆ ನರಪಶುತ್ವವು ಜ್ಞಾನಿಗಳ ಭವಿಷ್ಯದಂತೆ ಕಲಿಕಾಲಕ್ಕನುಸರಿಸಿ ಓಘದಿಂದ ತಾನೇ ಪ್ರಾಪ್ತವಾಗತೊಡಗಿರುವದರಿಂದ, ಅವಿವೇಕಿಲೋಕಮತದ ಅನರ್ಥಕಾರಿತ್ವಕ್ಕೆ ಅಡ್ಡಬರುವದು, ಅಥವಾ ಅದನ್ನು ನಿವಾರಿಸುವದು, ನಾವು ಕೊಟ್ಟಿರುವ ನರಸಿಂಹಾವತಾರದ ಚಾರಿತ್ರ್ಯದಂತೆ ಅಶಕ್ಯವಾಗಿದ್ದು, ಅದರ ಉಪಶಮದಭಾರವನ್ನು ಜಗತ್ಪಾಲಕನಾದ ಪರಮೇಶ್ವರನಮೇಲೆ ಹಾಕುವದೊಂದೇ ಉಪಾಯವು ಉಳಿದಂತಾಗಿರುತ್ತದೆ!

ಹೀಗೆ ಅಶಕ್ಯಸಂಗತಿಯ ವಿಷಯವಾಗಿ ಇಷ್ಟು ಊಹಾಪೋಹಮಾಡುವದು ವ್ಯರ್ಥವೆಂದು ಕೆಲವರಿಗೆ ತೋರಬಹುದು; ಹಾಗೆ ತೋರುವದು ಯಥಾರ್ಥವೂ ಆಗಿರುವದೆಂದು ನಾವೂ ಒಪ್ಪಿಕೊಳ್ಳುವೆವು; ಆದರೆ ಇದೇ ಮಹಾಭಾರತದಲ್ಲಿ ದ್ರೋಣ--ಭೀಷ್ಮ--ವಿದುರರೇ ಮೊದಲಾದ ಮಹಾತ್ಮರು, ತಮ್ಮ ಉಪದೇಶದಂತೆ ದುರ್ಯೋಧನನು ನಡೆಯುವದಿಲ್ಲವೆಂಬಮಾತು ತಮಗೆ ಗೊತ್ತಿದ್ದರೂ, ಗುರುಗಳೂ, ಹಿರಿಯರೂ ಎನಿಸುವ ತಮ್ಮ ಹಿತೋಪದೇಶದ ಕರ್ತವ್ಯವನ್ನು ಅವರು ದುರ್ಯೋಧನನಸಲುವಾಗಿ ಹೇಳಿಕೇಳಿ ಮಾಡಿರುವಂತೆ, ಭಾರತದ ಅವಲೋಕನಮಾಡುವ ನಾವು, ಲೋಕಕಲ್ಯಾಣದ ಮಾರ್ಗತೋರಿಸುವದು ಪವಿತ್ರಕರ್ತವ್ಯವೆಂದು ತಿಳಿದು, ಇಷ್ಟು ಊಹಾಪೋಹಮಾಡಿರುವೆವು. ಇದರಿಂದ ನಮ್ಮ ಅಭೀಷ್ಟವು ಸಾಧಿಸುವದೆಂದು ನಾವು ತಿಳಿದಿರುವದಿಲ್ಲ; ಆದರೆ ವಿವೇಕಿಗಳ ಸಮಾಧಾನಕ್ಕಾಗಿಯೂ, ಅವಿವೇಕಿಗಳ ವಿಚಾರಶಕ್ತಿಗೆ ಚಾಲನೆಕೊಡುವದಕ್ಕಾಗಿಯೂ ಹಿತಬುದ್ಧಿಯಿಂದ ಭಗವಾನ್ ವೇದವ್ಯಾಸರ ವಿಚಾರವನ್ನು ವಿಶದಪಡಿಸಿರುತ್ತೇವೆ; ಇದು ನಮ್ಮ ಸ್ವಂತದ ವಿಚಾರವಲ್ಲ. ಆದ್ದರಿಂದ—“ ಅವಿವೇಕಿ ಲೋಕಮತವೇ ಜಗತ್ತಿಗೆ ಕ್ಷೇಮಕರವೆಂತಲೂ, ಹಿಂದನದೆಲ್ಲ ಮಹಾಮೌಢ್ಯವೆಂತಲೂ, ಇದೊಂದು ಜಗತ್ಕಲ್ಯಾಣದ ಅಪೂರ್ವೋಪಾಯವೆಂ”ತಲೂ ತಮ್ಮ ದುರಭಿಮಾನದ ಆವೇಶದಲ್ಲಿ ತಿಳಿದುಕೊಂಡು, ಯತ್ನ ಪ್ರಯತ್ನಗಳಿಂದ ಅದರ ಪ್ರಸಾರಮಾ

ಡುವ ದೇಶಹಿತೈಷಿಗಳು, ತಮಗೆ ಸೇರದ ಈ ಭಾರತಕಾರರ ವಿಚಾರವನ್ನು ಖಂಡಿಸುವದಕ್ಕಾಗಿಯಾದರೂ ಈ ಲೇಖವನ್ನು ಮನಃಪೂರ್ವಕ ಓದಬೇಕು. ವಿಚಾರಾಂತದಲ್ಲಿ ಅವರು—“ ಅಹುದು, ವಿಚಾರವೆಲ್ಲ ಸರಿಯಾಗಿರುವದು; ಆದರೆ ಭಾರತದಕಾಲವು ಈಗೆಲ್ಲಿದೆ? ಈಗಿನಕಾಲಕ್ಕೆ ಇದೇ ಉಪಾಯವು ಬೇಕು. ಈಗಿನ ಹೀನಕಾಲಕ್ಕನುಸರಿಸಿ ನಾವು ಹೀನೋಪಾಯವನ್ನೇ ಕೈಕೊಂಡಿರುವೆವು. ಕಲಿಯುಗದಲ್ಲಿ ಧರ್ಮಲೋಪವಾಗುವದು ನಿಶ್ಚಯ ವಾದ್ದರಿಂದ, ನಾವು ಧರ್ಮಕ್ಕೆ ಗುಂಡುಹಾಕಿ ಅದನ್ನು ಕೊಂದುಬಿಡುವೆವು” ಎಂದು ಮುಂತಾಗಿ ಪ್ರಾಮಾಣಿಕತನದಿಂದ ತಿಳಿದುಕೊಂಡರೂ, ಇದ್ದದ್ದರಲ್ಲಿ ವಿವೇಕಿಗಳು ಸಮಾಧಾನಹಚ್ಚಿಕೊಳ್ಳಬಹುದು; ಆದರೆ ಹಾಗೆ ತಿಳಿದುಕೊಳ್ಳದೆ—“ ನಾವು ಯಾವ ಯುಗದಲ್ಲಿಯೂ, ಯಾವ ರಾಜ್ಯದಲ್ಲಿಯೂ ಇಲ್ಲದ ರಾಷ್ಟ್ರಸುಖದ ಅಪೂರ್ವ ಸಂಜೀವನೋಪಾಯವನ್ನು ಶೋಧಿಸಿದ್ದೇವೆಂ”ದು ಉಪನ್ಯಾಸಗಳಿಂದ, ಲೇಖಗಳೇ ಮೊದಲಾದ ಹಲವು ಮುಖಗಳಿಂದ, ಹಲವು ಉಪಾಯಗಳಿಂದ ಹೇಳುತ್ತ ವಿವೇಕಹೀನಜನರ ದಿಕ್ಕುತಪ್ಪಿಸಹತ್ತಿದರೆ, ದೇಶದ ನಾಳಿನಸಾವು ಇಂದೇಉಂಟಾದಂತಾಗಿ ದೇಶದ್ರೋಹಕ್ಕೆ ಅವರು ಪಾತ್ರರಾಗುವಲ್ಲಿ ಸಂಶಯವಿಲ್ಲ. ನಾವು ಈಮೊದಲೇ ಹೇಳಿದಂತೆ, ಸಾಯುವನಿಶ್ಚಯವಿದ್ದರೂ ಹೇಮಗರ್ಭಮಾತ್ರೆಹಾಕಿಸಿ,ಆಸನ್ನಮರಣದರೋಗಿಯನ್ನು ಎಚ್ಚರಗೊಳಿಸಿ ಒಮ್ಮೆಯಾದರೂ ಆತನಿಂದ ಭಗವನ್ನಾಮೋಚ್ಚಾರಮಾಡಿಸಿದರೆ, “ ಅಂತೇಮತಿಃ ಸಾಗತಿಃ” ಎಂಬ ಭಗವದ್ಗೀತೆಯ ಉಕ್ತಿಯಂತೆ,ಅಷ್ಟರಮಟ್ಟಿಗೆ ಆ ಮರಣೋನ್ಮುಖ ಜೀವಿಯ ಕಲ್ಯಾಣವಾಗುವದೆಂದು ಧರ್ಮಬುದ್ಧಿಯುವರ ನಿಶ್ಚಿತವಾದ ತಿಳುವಳಿಕೆಯಿರುತ್ತದೆ. ಈ ಮಾತನ್ನಾದರೂ ದುರ್ಲಕ್ಷಿಸದೆ ವಿಚಾರಮಾಡತಕ್ಕದ್ದು. ಒಟ್ಟಿಗೆ, ಅವಿವೇಕಿಗಳನ್ನು ಬಿಟ್ಟು ವಿವೇಕಿಗಳಾದ ಮತದಾರರನ್ನು ಆರಿಸಿ ಲೋಕಹಿತವಾಗುವಂತೆ ದೇಶಹಿತೈಷಿಗಳು ಯತ್ನಿಸುವದು ಅವಶ್ಯವಾಗಿರುವದು.

# ೫೯ ರಾಜನ ವರ್ಣಾನುರಾಗವು, ಉಜ್ವಲ ಪ್ರಜಾನುರಾಗದ್ಯೋತಕವು.

**ಉಪೋದ್ಘಾತ**— ರಾಜಸೂಯಾರಂಭಪರ್ವದ ೧೩ ನೇ ಅಧ್ಯಾಯದಲ್ಲಿ ಜನಮೇಜಯರಾಜನಿಗೆ ವೈಶಂಪಾಯನರು ಧರ್ಮರಾಜನ ಉತ್ತಮ ರಾಜ್ಯವ್ಯವಸ್ಥೆಯ ಸಂಬಂಧದಿಂದ ಹೇಳುವಾಗ—“ ಎಲೈ ಜನಮೇಜಯಾ, ಪ್ರತಾಪವಂತನಾದ ಆ ಧರ್ಮಿಷ್ಠ ಯುಧಿಷ್ಠಿರನು ಎಲ್ಲ ಜಾತಿಯ ಪ್ರಜೆಗಳ ಅನುರಾಗವನ್ನು ಸಂಪಾದಿಸಿದ್ದನು. ” ಎಂದು ಹೇಳಿರುವರು. ಈವಾಕ್ಯದಿಂದ ಧರ್ಮರಾಜನ ಧರ್ಮೌದಾರ್ಯ-ಪ್ರಜಾವಾತ್ಸಲ್ಯಗಳು ಹೇಗೆ ಅದ್ವಿತೀಯವಾಗಿದ್ದವೆಂಬದನ್ನು ಹೇಳುವವೊದಲು, ಕಾಲಮಹಿಮೆಯಿಂದ ತಮ್ಮ ಗೌರವವನ್ನು ಕಳೆದುಕೊಂಡಿದ್ದ ವರ್ಣಗಳಿಗೂ, ಜಾತಿ-ಕುಲಗಳಿಗೂ ಇರುವ ಭೇದವನ್ನು ಹೇಳುವದು ಅವಶ್ಯವಾಗಿರುತ್ತದೆ; ಯಾಕಂದರೆ ವ್ಯವಹಾರದಲ್ಲಿ ಸಾಮಾನ್ಯಜನರು ಈ ಮೂರೂ ಶಬ್ದಗಳನ್ನು ಒಂದೇ ಅರ್ಥದಲ್ಲಿ ಉಪಯೋಗಿಸಿ, ತಪ್ಪುಮಾಡುವ ವಾಡಿಕೆಯಿರುವದಲ್ಲದೆ, ಕೆಲವರು ಬಾಲಿಶರು ಈಗ ವರ್ಣವಿಧ್ವಂಸಕ ಉಪಾಯಗಳನ್ನು ಪ್ರಯತ್ನಪೂರ್ವಕ ಬಳಿಕೆಯಲ್ಲಿ ತರುತ್ತಿರುವರು. ಜಗತ್ತಿನಲ್ಲಿ ಜಾತಿಗಳೂ, ಕುಲಗಳೂ ಅನಂತವಾಗಿ ಇದ್ದರೂ, ವರ್ಣಗಳುಮಾತ್ರ ನಾಲ್ಕೇಇದ್ದು, ಅವು, ಅಲಭ್ಯರತ್ನಗಳಂತೆ ಭರತಭೂಮಿಯಪಾಲಿಗಷ್ಟೇ ಬಂದಿರುವವು. ಪರಮೇಶ್ವರನು ಒಂದೊಂದುದೇಶದವರಿಗೆ ಒಂದೊಂದು ವೈಶಿಷ್ಟ್ಯವನ್ನು ದಯಪಾಲಿಸಿರುವಂತೆ, ಭರತಭೂಮಿಗೆ ಈ ವರ್ಣಾಶ್ರಮ ಧರ್ಮಗಳ ಅಲಭ್ಯವೈಶಿಷ್ಟ್ಯವನ್ನು ದಯಪಾಲಿಸಿರುವದರಿಂದ, ಆ ನಮ್ಮ ಭರತಭೂಮಿಯು ಧರ್ಮಪ್ರಧಾನವಾಗಿ ಅನಾದಿಕಾಲದಿಂದ ಇಂದಿನವರೆಗೂ ಆಧ್ಯಾತ್ಮಿಕ ಜಗದ್ಗುರುತ್ವದ ಗೌರವವನ್ನು ಪಡೆದಿರುವದೆಂದು ಹೇಳಬಹುದು. ಈಗ ಜಗತ್ತಿನೊಳಗಿನ ಎಷ್ಟೋದೇಶಗಳು ತಮ್ಮ ಐಹಿಕ ವಿಷಯಸುಖಾಭಿವೃದ್ಧಿಯ ಮಹತ್ವಾಕಾಂಕ್ಷೆಯಿಂದ ಎಷ್ಟೇ ಭೌತಿಕ ಪ್ರಗತಿಯನ್ನು ಪಡೆದು ಜಗತ್ತಿನ ವಿಷಮತೆಯನ್ನು ಹೆಚ್ಚಿ

ಸುತ್ತ ಜಗತ್ತಿನ ತಾಪವನ್ನು ಹೆಚ್ಚಿಸುತ್ತ ತಾವು ಆಢ್ಯತೆಯಿಂದ ಮೆರೆಯುತ್ತಿದ್ದರೂ, ಮತ್ತು ಮುಂದೆ ಅವು ಇನ್ನೂ ಇದಕ್ಕೂ ಹೆಚ್ಚು ಐಹಿಕ ಪ್ರಗತಿಯನ್ನು ಪಡೆದು ಜಗತ್ತಿನ ವಿಷಮತೆಯ ತಾಪವನ್ನು ಮತ್ತಿಷ್ಟು ಹೆಚ್ಚಿಸಿ ಜಗತ್ಕಂಟಕಗಳಾದರೂ ಜಗತ್ತಿನಲ್ಲಿ ಸುಖಮೂಲವಾದ ಶಾಂತಿಯ ಪ್ರತಿಷ್ಠಾಪನೆಯಾಗುವದಾದರೆ, ಕಡೆಗೆ ಭರತಭೂಮಿಯ ಧಾರ್ಮಿಕ ಶೀಲದಿಂದಲೇ ಆಗಬೇಕಾಗುವದೆಂಬದರಲ್ಲಿ ಸಂಶಯವಿಲ್ಲ; ಯಾಕಂದರೆ ಭರತಭೂಮಿಯು ತನ್ನಲ್ಲಿಯ ವರ್ಣಾಶ್ರಮ ಧರ್ಮಗಳ ಪಾಲನವನ್ನು ಸುಖಸಾಧನವೆಂದಲ್ಲ, ಪರಲೋಕಸಾಧನದ ತನ್ನ ಪವಿತ್ರಕರ್ತವ್ಯವೆಂದು ತಿಳಿದು, ಹಲವು ಕಷ್ಟನಷ್ಟಗಳನ್ನು ಅನುಭವಿಸುತ್ತ ಅನಾದಿಕಾಲದಿಂದ ಮಾಡುತ್ತ ಬಂದಿರುವದರಿಂದ, ಅದು ಧರ್ಮನಿಷ್ಠವಾಗಿಯೇ ಅಲ್ಲ, ಧರ್ಮಮಯವಾಗಿ ಶಾಂತಿಯ ಗುಟ್ಟನ್ನು ಸಂಪೂರ್ಣವಾಗಿ ಅರಿತಿರುವದು; ಆದ್ದರಿಂದ ನಾವು ಭರತಭೂಮಿಯ ಈ ಪ್ರಾಶಸ್ತ್ಯದ ಕಾರಣಗಳಾದ ವರ್ಣಾದಿಗಳ ಗೌರವವನ್ನು ವ್ಯಕ್ತಪಡಿಸುವದಕ್ಕಾಗಿ ಈಗ ವರ್ಣ—ಜಾತಿ—ಕುಲ ಇವುಗಳಲ್ಲಿ ಭೇದವು ಹೇಗಿರುತ್ತದೆಂಬದರ ದಿಗ್ದರ್ಶನವನ್ನು ಸ್ವಲ್ಪದರಲ್ಲಿ ಕೆಳಗೆ ಮಾಡುವೆವಲ್ಲದೆ, ವರ್ಣವಿಧ್ವಂಸಕತೆಯು ಎಷ್ಟು ಘಾತಕವೆಂಬದನ್ನೂ ಯಥಾಮತಿ ತೋರಿಸುವೆವು.

**ವರ್ಣಗಳು**—ಇವು ಮನುಷ್ಯರ ಮೈಬಣ್ಣಗಳಮೇಲಿಂದ ಉಂಟಾಗಿರುವವೆಂದು ಪರದೇಶದವರು ತಪ್ಪುತಿಳುವಳಿಕೆಯ ತರ್ಕದಿಂದ ಕಲ್ಪಿಸಿದ್ದು, ಅದನ್ನೇ ಈಗ ಕೆಲವರು ಸತ್ಯವೆಂದು ತಿಳಿಯುವರು; ಆದರೆ ವರ್ಣಗಳು ವೈದಿಕರ ಮತದಂತೆ ಈಶ್ವರನಿರ್ಮಿತಗಳಾಗಿರುವವಲ್ಲದೆ, ಮನುಷ್ಯಕೃತಗಳಲ್ಲವು. ಸೃಷ್ಟಿಕರ್ತೃವಾದ ಪರಮೇಶ್ವರನು ಸೃಷ್ಟಿಯವ್ಯಾಪಾರವು ಸುಸೂತ್ರವಾಗಿ ಸಾಗಬೇಕೆಂದು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳನ್ನು ಅವವುಗಳ ಗುಣಕರ್ಮವಿಭಾಗದೊಡನೆ ಉಂಟುಮಾಡಿರುವನು; ಆದ್ದರಿಂದಲೇ ಭಗವಂತನು ತನ್ನ ಭಗವದ್ಗೀತೆಯಲ್ಲಿ—“ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮವಿಭಾಗಶಃ” ಎಂದು ಸ್ವಮುಖದಿಂದ ಹೇಳಿರುತ್ತಾನೆ. ಇದಲ್ಲದೆ ಪುರುಷಸೂಕ್ತಶ್ರುತಿಯು—“ಬ್ರಾಹ್ಮಣೋಸ್ಯ ಮುಖಮಾಸೀತ್ ಬಾಹೂರಾಜನ್ಯಃಕೃತಃ” ಎಂದು ಮುಂತಾಗಿ ಆನಾಲ್ಕು ವರ್ಣಗಳ ಉತ್ಪತ್ತಿಸ್ಥಾನಗಳನ್ನು ಕ್ರಮವಾಗಿ—“ಪರಮೇಶ್ವರನ ಮುಖ—

ಬಾಹು—ತೊಡೆ—ಪಾದಗಳೆಂ"ದು ಸ್ಪಷ್ಟವಾಗಿ ಹೇಳುತ್ತಿರುವದು. ಇದಲ್ಲದೆ ವರ್ಣಗಳು ಈಶನಿರ್ಮಿತಗಳೆಂಬದಕ್ಕೆ, ಅವು ಅನಾದಿವೇದಕಾಲದಿಂದ ಈಗಿನ ಹೀನ ಕಲಿಕಾಲದವರೆಗೆ, ಕಾಲಕ್ಕನುಸರಿಸಿ ಹಲವು ಧರ್ಮಿಷ್ಠರ ಪ್ರೋತ್ಸಾಹಕ್ಕೆ, ಹಾಗು ಅಧರ್ಮಿಷ್ಠರ ಅಸೂಯಾದ್ವೇಷಗಳಿಗೆ ಗುರಿಯಾಗಿ, ಕ್ರಮವಾಗಿ ಉತ್ಕರ್ಷಾಪಕರ್ಷಗಳನ್ನು ಹೊಂದುತ್ತ, ಬಹಳವೇಕೆ, ಶ್ರೀಮದ್ಭಾಗವತ ಮಹಾ ಪುರಾಣದಲ್ಲಿ ಹೇಳಿರುವಂತೆ ಕಾಲಮಹಿಮೆಯಿಂದ ಎಷ್ಟೋಸಾರೆ ನಷ್ಟಪ್ರಾಯಗಳೂ ಆಗುತ್ತ, ಈಗಲಾದರೂ ಬೀಜರೂಪದಿಂದಲೇ ಆಗಲೊಲ್ಲದೇಕೆ, ಜೀವಿಸಿರುವದು ಪ್ರಬಲಸಾಕ್ಷಿಯಾಗಿರುತ್ತದೆ! ಈಶನಿರ್ಮಿತವಾದ ಸೃಷ್ಟಿಯ ಘಟಕದ್ರವ್ಯಗಳು ರೂಪಾಂತರ ಹೊಂದುತ್ತಿದ್ದರೂ ನಾಶವಾಗದಿರುಂತೆ, ಈ ಈಶನಿರ್ಮಿತ ವರ್ಣಾಶ್ರಮಗಳ ಸ್ಥಿತಿಯೂ ಇರುವದರಿಂದ, ಅವು ಪರಮಾತ್ಮನ ಸೃಷ್ಟಿಯ ಘಟಕಗಳೇ ಆಗಿದ್ದು, ಸೃಷ್ಟಿಯ ಪ್ರಳಯದವರೆಗೆ ಅವು ಇದ್ದೇ ಇರುತ್ತವೆಂದು ನಂಬತಕ್ಕದ್ದು. ಈವರೆಗೆ ಜಗತ್ತಿನಲ್ಲಿ ಎಷ್ಟೋ ಸಂಸ್ಕೃತಿಗಳು ಉದಯಹೊಂದಿದವು-ಮಣ್ಣುಗೂಡಿದವು; ಎಷ್ಟೋಸುಧಾರಣೆಗಳು ಬೈಲಿಗೆಬಂದವು ಹಾಳಾಗಿಹೋದವು; ಆದರೆ ಭರತಭೂಮಿಯ ವರ್ಣಾಶ್ರಮಗಳ ಸಹಮೂಲನಾಶವು ಮಾತ್ರ ಈವರೆಗೆ ಅಗಿರುವದಿಲ್ಲ; ಮತ್ತು ಈವರೆಗಿನ ಅನುಭವವನ್ನು ನೋಡಿದರೆ ಮುಂದೆಯೂ ಅವುಗಳನಾಶವು ಆಗುವದಿಲ್ಲವೆಂದು ಹೇಳಬಹುದು; ಆದ್ದರಿಂದ ವರ್ಣಗಳು ಕೇವಲ ಮನುಷ್ಯರಲ್ಲಿ ಅಸೂಯೆಯನ್ನು ಹುಟ್ಟಿಸುವ ಶ್ರೇಷ್ಠತ್ವ-ಕನಿಷ್ಟತ್ವಗಳ ದರ್ಶಕಗಳಾಗಲಿ, ಮನುಷ್ಯನಗೌರವರ್ಣ—ಕೃಷ್ಣವರ್ಣಾದಿ ವರ್ಣದ್ಯೋತಕಗಳಾಗಲಿ ಆಗಿರದೆ, ಅವು ಜಗತ್ಕಲ್ಯಾಣಕಾರಕ ಅವಿನಾಶಿ ವೃತ್ತಿಗಳಿಗೆ ಆಧಾರಗಳಾಗಿರುವವೆಂದು ತಿಳಿಯತಕ್ಕದ್ದು.

ಸೃಷ್ಟಿಯ ಕಲ್ಯಾಣಕಾರಕಗಳಾದ ಆ ಮುಖ್ಯ ವೃತ್ತಿಗಳು—ಜ್ಞಾನವೃತ್ತಿ, ರಕ್ಷಣವೃತ್ತಿ, ಪೋಷಣವೃತ್ತಿ, ಸೇವಾವೃತ್ತಿ ಎಂದು ನಾಲ್ಕು ಇರುವವು. ಜ್ಞಾನವೃತ್ತಿಯಿಂದ ಜಗತ್ತಿಗೆ ಸುಖಶಾಂತಿಗಳೂ, ರಕ್ಷಣವೃತ್ತಿಯಿಂದ ಜಗತ್ತಿಗೆಸ್ವಸ್ಥತೆಯೂ, ಪೋಷಣವೃತ್ತಿಯಿಂದ ಜಗತ್ತಿಗೆ ತೃಪ್ತಿಯೂ, ಸೇವಾವೃತ್ತಿಯಿಂದ ಅಥವಾ ಉದ್ಯೋಗತತ್ಪರತೆಯಿಂದ ಜಗತ್ತಿಗೆ ಇಷ್ಟಾರ್ಥಪ್ರಾಪ್ತಿಯೂ ಉಂಟಾಗುವವು. ಅಂದಬಳಿಕ ಜಗತ್ಕಲ್ಯಾಣಕ್ಕಾಗಿ ಈ

ಜ್ಞಾನ, ರಕ್ಷಣ, ಪೋಷಣ, ಸೇವೆಗಳೆಂಬ ವೃತ್ತಿಗಳಿಗಿಂತ ಹೆಚ್ಚಿನ ಯಾವ ಸಂಗತಿಗಳ ಆವಶ್ಯಕತೆಯಿರಬಹುದು? ತಪಸ್ಸಿನಿಂದ ಈ ನಾಲ್ಕು ವೃತ್ತಿಗಳ ಪರಿಪೋಷಣ ಮಾಡುವ ಜವಾಬದಾರಿಯನ್ನು ಪರಮೇಶ್ವರನು ಕ್ರಮವಾಗಿ ತಾನು ನಿರ್ಮಿಸಿರುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಚತುರ್ವರ್ಣದವರಿಗೆ ಒಪ್ಪಿಸಿರುವನೆಂದು ಶ್ರುತಿ-ಸ್ಮೃತ್ಯಾದಿಗಳಿಂದ ಗೊತ್ತಾಗುವದು. ಈ ನಾಲ್ಕು ವರ್ಣಗಳು ತಮ್ಮ ತಮ್ಮ ವೃತ್ತಿ ರಕ್ಷಣದ ದೃಷ್ಟಿಯಿಂದಲೂ, ಉಚ್ಚಲೋಕಾದಿಗಳ ಸಂಪಾದನದ ದೃಷ್ಟಿಯಿಂದಲೂ ತಮ್ಮ ತಮ್ಮಷ್ಟಕ್ಕೆ ಸರ್ವಶ್ರೇಷ್ಠಗಳಾಗಿದ್ದರೂ, ವೃತ್ತಿಗಳಸ್ವರೂಪ-ಉದ್ದೇಶಗಳ ತಾರತಮ್ಯದೃಷ್ಟಿಯಿಂದ ಆ ವರ್ಣಗಳು ಶ್ರೇಷ್ಠ-ಕನಿಷ್ಠಸ್ಥಾನಾಪನ್ನಗಳಾಗಿರುವವು. ಹೇಗಿದ್ದರೂ ಅವೆಲ್ಲ ಪರಮಾತ್ಮನ ಅವಯವಗಳಿಂದ ಹುಟ್ಟಿರುವದರಿಂದ ದೈವಸಂಭೂತಗಳೇ ಆಗಿರಲು, ಸರ್ವಮಾನ್ಯಗಳಾಗಿರುತ್ತವೆಂಬದರಲ್ಲಿ ಸಂಶಯವಿಲ್ಲ. ಜಗತ್ಕಲ್ಯಾಣದ, ಅಥವಾ ಜಗದ್ಧಾರಣದ ಈ ನಾಲ್ಕುವೃತ್ತಿಗಳಲ್ಲಿ ಒಂದರ ಕೊರತೆಯಾದರೂ ಅಷ್ಟರಮಟ್ಟಿಗೆ ಜಗದ್ವ್ಯಾಪಾರದ ಸುಯಂತ್ರತೆಗೂ, ಗೌರವಕ್ಕೂ ಬಾಧೆಬರುತ್ತದೆಂದು ತಿಳಿಯಬೇಕು!

ಹೀಗೆ ಜಗತ್ತಿನ ಯೋಗಕ್ಷೇಮವು ಸರಿಯಾಗಿ ಸಾಗಬೇಕಾದರೆ, ಈ ನಾಲ್ಕುವೃತ್ತಿಗಳು ಜಗತ್ತಿನಲ್ಲಿ ಇರಬೇಕಾಗುವಂತೆ, ಒಬ್ಬವ್ಯಕ್ತಿಯ ಯೋಗಕ್ಷೇಮವು ಆತನೊಬ್ಬನಿಂದಲೇ ಸ್ವತಂತ್ರವಾಗಿಯೂ, ಸರಿಯಾಗಿಯೂ ಸಾಗಬೇಕಾದರೆ ಈನಾಲ್ಕುವೃತ್ತಿಗಳೂ ಆ ಒಬ್ಬವ್ಯಕ್ತಿಯಲ್ಲಿ ಇರಲೇಬೇಕಾಗುವವು; ಅಂದರೆ ಆ ವ್ಯಕ್ತಿಯಲ್ಲಿ ವಿವೇಕಯುಕ್ತಜ್ಞಾನವೂ, ತನ್ನರಕ್ಷಣಮಾಡಿಕೊಳ್ಳುವ ಸಾಮರ್ಥ್ಯವೂ, ತನ್ನ ಪೋಷಣಮಾಡಿಕೊಳ್ಳುವ ಯೋಗ್ಯತೆಯೂ, ತನ್ನ ಸೇವೆಯನ್ನು ತಾನೇ ಮಾಡಿಕೊಳ್ಳುವ ಉದ್ಯೋಗತತ್ಪರತೆಯೂ, ಅರ್ಥಾತ್ ಬ್ರಾಹ್ಮಣವೃತ್ತಿ, ಕ್ಷಾತ್ರವೃತ್ತಿ, ವೈಶ್ಯವೃತ್ತಿ, ಶೂದ್ರವೃತ್ತಿ ಇವು ನಾಲ್ಕು ಒಟ್ಟುಗೂಡಿ ಆವ್ಯಕ್ತಿಯಲ್ಲಿ ಇರಬೇಕಾಗುವವು. ಹೀಗೆ ಈ ನಾಲ್ಕುವೃತ್ತಿಗಳನ್ನು ಪ್ರಸಂಗವಶಾತ್ ಒಬ್ಬನೇ ವ್ಯಕ್ತಿಯು ತಾಳಬೇಕಾದದ್ದರಿಂದ, ಕೇವಲ ಯೋಗಕ್ಷೇಮಸಾಧನಗಳಾದ ಆ ವೃತ್ತಿಗಳ ವಿಷಯದ ಉಚ್ಚನೀಚಭಾವದ ಕಲ್ಪನೆಯು ವ್ಯಕ್ತಿಹಿತದೃಷ್ಟಿಯಿಂದ ಎಷ್ಟುಕ್ಷುದ್ರವಾಗಿರುವದೆಂಬದನ್ನು ವಿವೇಕಿಗಳು ವಿಚಾರಿಸತಕ್ಕದ್ದು. ಯಾವನೊಬ್ಬ ವ್ಯಕ್ತಿಯು

ಯಾವದೊಂದು ವೃತ್ತಿಯ ಸಂಬಂಧದಿಂದ, "ಇದು ಉಚ್ಚತಮವೃತ್ತಿಯೆ"ಂಬ ಭಾವತಾಳಿ, ಕೇವಲ ಆ ಉಚ್ಚತಮವೃತ್ತಿಯೊಂದನ್ನೇ ಅಂಗೀಕರಿಸಿ ಉಳಿದ ವೃತ್ತಿಗಳನ್ನು ಪರಿತ್ಯಜಿಸಿಬಿಟ್ಟರೆ, ಆ ವ್ಯಕ್ತಿಯು ಸೃಷ್ಟಿಯಲ್ಲಿ ಸ್ವತಂತ್ರವಾಗಿ ಜೀವಿಸಬಹುದೋ? ಮನುಷ್ಯೇತರ ಪ್ರಾಣಿಗಳಲ್ಲಿ ದೇವರು ಈ ನಾಲ್ಕೂ ವೃತ್ತಿಗಳನ್ನೂ, ಆ ವೃತ್ತಿಗಳ ವ್ಯಾಪಾರ ಚಾಲನಕ್ಕೆ ಅನುಕೂಲವಾದ ಸ್ಥಿತಿಗತಿಗಳನ್ನೂ ಅವಕ್ಕೆ ದಯಪಾಲಿಸಿರುವದರಿಂದಲೇ ಅವು ತಮ್ಮ ಯೋಗಕ್ಷೇಮವನ್ನು ಸ್ವತಂತ್ರವಾಗಿ ತಾವೇ ಸಾಗಿಸಿಕೊಳ್ಳುತ್ತಿರುವವು. ಹೀಗೆ ಈ ಜಗತ್ಕಲ್ಯಾಣಕಾರಕ ನಾಲ್ಕುವೃತ್ತಿಗಳು, ಮನುಷ್ಯೇತರ ಪ್ರಾಣಿಗಳಿಂದ ಆರಂಭಿಸಿ, ಒಬ್ಬ ಮನುಷ್ಯವ್ಯಕ್ತಿಯಿಂದ ಸಹಿತವಾಗಿ ಜಗತ್ತಿನತುಂಬೆಲ್ಲ ಸರ್ವವ್ಯಾಪಿಯಾಗಿರುವಾಗ, ಭರತಭೂಮಿಯಲ್ಲಿದ್ದಂತೆ ಬೇರೆ ಭೂಮಿಗಳಲ್ಲಿ ಅವು ಇರುವದಿಲ್ಲವೆಂದು ಹೇಗೆ ಹೇಳಬೇಕು? ಮೇಲೆ ನಾವು ಒಬ್ಬ ವ್ಯಕ್ತಿಯ ಯೋಗಕ್ಷೇಮಕ್ಕಾಗಿಯೂ ಈ ನಾಲ್ಕುವೃತ್ತಿಗಳ ಆವಶ್ಯಕತೆಯಿರುತ್ತದೆಂದು ಹೇಳಿರುವಾಗ, ದೇಶವಾಸಿಗಳ ವ್ಯವಹಾರ ಸೌಕರ್ಯಕ್ಕೆ ಇವು ಇಲ್ಲದಿದ್ದರೆ ಹೇಗೆ ನಡೆದೀತು? ಆದರೆ ಆ ವೃತ್ತಿಗಳು ಭರತಭೂಮಿಯಲ್ಲಿರುವದಕ್ಕೂ, ಬೇರೆ ಭೂಮಿಗಳಲ್ಲಿರುವದಕ್ಕೂ ವೈಲಕ್ಷಣ್ಯವಿರುತ್ತದೆಂದು ಮಾತ್ರ ಹೇಳಬಹುದು.

ಇನ್ನು ಈ ಜಗತ್ಕಲ್ಯಾಣಕಾರಕಗಳಾದ ಜ್ಞಾನ–ರಕ್ಷಣ–ಪೋಷಣ–ಸೇವಾವೃತ್ತಿಗಳು ಭರತಭೂಮಿಯಲ್ಲಿ ಕ್ರಮವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ವರ್ಣನಿಷ್ಠಗಳು ಹೇಗಾದವೆಂಬದನ್ನು ಕುರಿತು ಮೊದಲು ತರ್ಕಿಸುವಸಾಹಸಮಾಡುವಾ. ಮೇಲೆ ನಾವು ಈ ವೃತ್ತಿಗಳು ಈಶ್ವರಸೃಷ್ಟಿಯ ಘಟಕದ್ರವ್ಯಗಳಂತೆ ಇರುವವೆಂದು ಹೇಳಿರುವೆವಷ್ಟೆ? ಅಂದಬಳಿಕ ಪ್ರಾಣಿಗಳ ಸೃಷ್ಟಿಯೊಡನೆಯೇ ಈ ವೃತ್ತಿಗಳ ಸೃಷ್ಟಿಯೂ ಆಯಿತೆಂದು ಬೇರೆ ಹೇಳುವ ಅವಶ್ಯವಿಲ್ಲ. ಮೊದಮೊದಲಿಗೆ ಈ ವೃತ್ತಿಗಳು ಮನುಷ್ಯೇತರ ಪ್ರಾಣಿಗಳಲ್ಲಿ ಇದ್ದಂತೆ ಮನುಷ್ಯರಲ್ಲಿಯೂ ವ್ಯಕ್ತಿನಿಷ್ಠವಾಗಿಯೂ, ಅನಿಶ್ಚಿತವಾಗಿಯೂ ಇರಬಹುದು; ಇದಕ್ಕೆ ಬೃಹದಾರಣ್ಯಕೋಪನಿಷತ್ತಿನಲ್ಲಿಯ, ಹಾಗು ಭಾಗವತದಲ್ಲಿಯ ಕೃತಯುಗದ ಹಂಸನಾಮಕ ಒಂದೇವರ್ಣದ ಉಲ್ಲೇಖವು ಸಾಕ್ಷಿಯಾಗಿರುವದು. ಆದರೆ ದೇವರು ಮನುಷ್ಯನಲ್ಲಿ ಇತರಪ್ರಾ

ಣಿಗಳಿಗಿಲ್ಲದ ವಿವೇಕಯುಕ್ತಜ್ಞಾನವನ್ನಿಟ್ಟಿರುವದರಿಂದ, ಅಂದರೆ ಪ್ರಾಣಿಸಾಮಾನ್ಯವಾದ ಆಹಾರ–ನಿದ್ರಾ–ಭಯ–ಮೈಥುನಗಳಸಾಧನದ ಸಾಮಾನ್ಯಜ್ಞಾನದ ಹೊರತು, ಪರಲೋಕ–ಮೋಕ್ಷಾದಿ ಉಚ್ಚಹೇತುಸಾಧನದ ವಿವೇಕಯುಕ್ತಜ್ಞಾನವನ್ನಿಟ್ಟಿರುವದರಿಂದ, ಆ ಮನುಷ್ಯಪ್ರಾಣಿಯು ಆ ಪರಲೋಕಪ್ರಾಪ್ತ್ಯಾದಿ ಉಚ್ಚಫಲಗಳನ್ನು ತಪಶ್ಚರ್ಯದಿಂದ ಸಾಧಿಸಹತ್ತಿರಬಹುದು. ಈಶ್ವರನ ತಿರ್ಯಗೇತರಸೃಷ್ಟಿಯು ಮಾನಸಿಕ, ದೈಹಿಕ, ಮೈಥುನಿಕ ಎಂದು ಮೂರು ವಿಧವಾಗಿದ್ದು, ಆ ಮೂರೂ ಸೃಷ್ಟಿಗಳು ಉತ್ತರೋತ್ತರ ಪಾವಿತ್ರ್ಯವನ್ನು ಕಳಕೊಳ್ಳುವಂಥವು ಇರುವದರಿಂದ, ಮೈಥುನಸೃಷ್ಟಿಯು ಅಭಿವೃದ್ಧವಾಗುತ್ತ ಹೋದಂತೆ ಈನಾಲ್ಕು ವೃತ್ತಿಗಳ ಸಂಕರವಾಗಿ ಅವುಗಳಲ್ಲಿ ಮಾಲಿನ್ಯವು ಹೆಚ್ಚಲು, ದೈವೀಭಾವದ ವೈದಿಕಋಷಿಗಳ ತಪಸ್ಸಿಗೆ ವಿಘ್ನಬರತೊಡಗಿರಬಹುದು. ಇದನ್ನರಿತು ಅತಿಪ್ರಾಚೀನಕಾಲದ ವೈದಿಕಋಷಿಗಳು ತಮ್ಮ ದೀರ್ಘಕಾಲದ ತಪಸ್ಸಿನ ದೈವೀಜ್ಞಾನದಿಂದ ಆನಾಲ್ಕೂವೃತ್ತಿಗಳ ಪರಿಪೋಷಣದ ಶಾಶ್ವತಮಾರ್ಗವನ್ನು ಕಂಡುಹಿಡಿದು, ಆಗಿನಕಾಲದ ತಮ್ಮ ಪರಿಚಿತಮನುಷ್ಯವರ್ಗದಲ್ಲಿ ಸಾತ್ವಿಕ, ರಾಜಸ, ತಾಮಸ ಗುಣಾಧಿಕರ ಬೇರೆ ಬೇರೆ ನಾಲ್ಕು ಪಂಗಡಗಳನ್ನು ಮಾಡಿರಬಹುದು. ಆ ಪಂಗಡಗಳಲ್ಲಿ ಸತ್ವಗುಣಪ್ರಧಾನವಾದ ಪಂಗಡಕ್ಕೆ ಪ್ರಾಮುಖ್ಯವಾಗಿ ಜ್ಞಾನವೃತ್ತಿಯ ಪರಿಪೋಷಣದ ಜವಾಬದಾರಿಯನ್ನು ವಹಿಸಿಕೊಟ್ಟು, ಆಜವಾಬದಾರಿಗೆ ತಕ್ಕಗುಣಕರ್ಮಗಳನ್ನು, ಅಂದರೆ ನಿವೃತ್ತಿಪ್ರಧಾನಾನುಕೂಲಸ್ಥಿತಿಯ ಪ್ರಾಪ್ತಿಯ ಸಾಧನಗಳನ್ನು ಒದಗಿಸಿಕೊಟ್ಟು, ಆವರ್ಣಕ್ಕೆ ಬ್ರಾಹ್ಮಣ ಎಂಬ ಸಂಜ್ಞೆಯನ್ನು ಕೊಟ್ಟಿರಬಹುದು; ಅದರಂತೆ ರಜೋಗುಣಪ್ರಧಾನರಾದವರಲ್ಲಿ ಎರಡು ಪಂಗಡಗಳನ್ನು ಮಾಡಿ, ಆ ಎರಡೂ ಪಂಗಡಗಳಲ್ಲಿಯೂ ಸತ್ವಾಧಿಕರಾಗಿದ್ದ ಪಂಗಡದವರಿಗೆ ರಕ್ಷಣವೃತ್ತಿಯ ಪರಿಪೋಷಣದ ಜವಾಬುದಾರಿಯನ್ನು ವಹಿಸಿಕೊಟ್ಟು, ಆ ಜವಾಬದಾರಿಗೆತಕ್ಕ ಗುಣಕರ್ಮಗಳನ್ನು, ಅಂದರೆ ಪ್ರವೃತ್ತಿಪ್ರಧಾನಾನುಕೂಲವಾದ ಪರಾಕ್ರಮಸ್ಥಿತಿಯ ಪ್ರಾಪ್ತಿಯ ಅನುಕೂಲಸ್ಥಿತಿಯನ್ನು ಒದಗಿಸಿಕೊಟ್ಟು, ಆ ವರ್ಗಕ್ಕೆ ಕ್ಷತ್ರಿಯ ಎಂಬ ಸಂಜ್ಞೆಯನ್ನು ಕೊಟ್ಟಿರಬಹುದು; ಅದರಂತೆ ರಜೋಗುಣಪ್ರಧಾನವಾದ ತಮೋಗುಣಾಧಿಕ್ಯದ ಎರಡನೆಯ ಪಂಗಡಕ್ಕೆ ಪೋಷಣವೃತ್ತಿಯ ಪರಿಪೋಷಣದ

ಜವಾಬದಾರಿಯನ್ನು ವಹಿಸಿಕೊಟ್ಟು, ಅದಕ್ಕೆ ತಕ್ಕ ಗುಣಕರ್ಮಗಳನ್ನು, ಅಂದರೆ ಪ್ರವೃತ್ತಿಪ್ರಧಾನವಾದ ಧನಿಕಸ್ಥಿತಿಯ ಪ್ರಾಪ್ತಿಯ ಸಾಧನಗಳನ್ನು ಒದಗಿಸಿಕೊಟ್ಟು ಆ ವರ್ಗಕ್ಕೆ ವೈಶ್ಯ ಎಂಬ ಸಂಜ್ಞೆಯನ್ನು ಕೊಟ್ಟಿರಬಹುದು; ಅದರಂತೆ ತಮೋಗುಣಾಧಿಕಪಂಗಡದವರಿಗೆ ಮೇಲಿನ ತ್ರೈವರ್ಣಿಕರ ಸೇವಾವೃತ್ತಿಯ ಪೋಷಣದ ಜವಾಬದಾರಿಯನ್ನು ಒಪ್ಪಿಸಿಕೊಟ್ಟು, ಆ ಜವಾಬದಾರಿಗೆ ತಕ್ಕ ಗುಣಕರ್ಮಗಳನ್ನು, ಅಂದರೆ, ವಿಧೇಯಗುಣಯುಕ್ತ ಕಾರ್ಯದಕ್ಷತೆಯ ಸಾಧಾನಗಳನ್ನು ಒದಗಿಸಿಕೊಟ್ಟು ಆ ಪಂಗಡಕ್ಕೆ ಶೂದ್ರ ಎಂಬ ಸಂಜ್ಞೆಯನ್ನು ಕೊಟ್ಟಿರಬಹುದು. ಹೀಗೆ ಮಹಾತ್ಮರಾದ ವೈದಿಕಋಷಿಗಳು ಪಂಗಡಗಳ ವಿಭಾಗಮಾಡಿ ಅವಕ್ಕೆ ತಕ್ಕ ವೃತ್ತಿಗಳನ್ನೂ, ಆ ವೃತ್ತಿಪೋಷಕ ಗುಣಕರ್ಮಗಳನ್ನೂ ಹಂಚಿಕೊಟ್ಟು ಅಷ್ಟಕ್ಕೆ ಬಿಡದೆ, ಆ ಪಂಗಡಗಳಲ್ಲಿ ಪರಸ್ಪರ ದೃಢತರವಾದ ಮೈತ್ರಿಯೂ, ಸಹಕಾರಿತೆಯೂ ಉಂಟಾಗುವಂತೆ ತಮ್ಮ ದೈವೀಜ್ಞಾನದ ಬಲದಿಂದ ಆ ಪಂಗಡಗಳನ್ನು ಧರ್ಮರಜ್ಜುವಿನಿಂದ ಬಂಧಿಸಿ, ಅವವುಗಳ ಕರ್ತವ್ಯದೃಷ್ಟಿಯ ಆಯಾ ಧರ್ಮಪಾಲನವೇ ಅವವುಗಳ ಉಚ್ಚಲೋಕಪ್ರಾಪ್ತ್ಯಾದಿ ಶ್ರೇಷ್ಠ ಪುರುಷಾರ್ಥಗಳ ಸಾಧನವೆಂಬ ಸಿದ್ಧಾಂತವನ್ನು ಆ ನಾಲ್ಕೂ ಪಂಗಡಗಳಲ್ಲಿ ಸ್ಥಿರಗೊಳಿಸಿರಬಹುದು. ಹೀಗೆಭರತಭೂಮಿಯ ಅತಿಪ್ರಾಚೀನಕಾಲದ ಮನುಷ್ಯವರ್ಗಕ್ಕೆ, ಮಹಾತ್ಮರಾದ ಅತಿಪ್ರಾಚೀನ ವೈದಿಕಋಷಿಗಳ ದೂರದೃಷ್ಟಿಯಪ್ರಭಾವದಿಂದಲೂ, ಅವರ ತಪೋಬಲದ ಮಹಿಮೆಯಿಂದಲೂ ಭಾಗ್ಯಶಾಲಿಯಾದ ಭರತಭೂಮಿಗೆ ಆ ನಾಲ್ಕೂ ಕಲ್ಯಾಣಕಾರಕಗಳಾದ ವೃತ್ತಿಗಳು, ಬೇರೆ ಬೇರೆ ಪಂಗಡವಾಗಿರುವ ನಾಲ್ಕು ಪಂಗಡ ವಿಭಾಗಿಗಳಾಗಿ, ಶಾಶ್ವತ ಪಿತ್ರಾರ್ಜಿತ ಸೊತ್ತಿನಂತೆ ವ್ಯವಸ್ಥಿತವಾಗಿ ದೊರೆತಿರಬಹುದು. ಆದರೂ ಮೊದಮೊದಲಿಗೆ ಬ್ರಾಹ್ಮಣರು ಕ್ಷತ್ರಿಯರಾಗುವದೂ, ಕ್ಷತ್ರಿಯರು ಬ್ರಾಹ್ಮಣರಾಗುವದೂ ಬಳಿಕೆಯಲ್ಲಿತ್ತೆಂದು ಶ್ರೀಮದ್ಭಾಗವತಾದಿ ಮಹಾ ಪುರಾಣಗಳಿಂದ ಗೊತ್ತಾಗುವದು; ಆದರೆ ಮುಂದೆ ಯುಗಾಂತರವಾದಂತೆ ಸೃಷ್ಟಿಯ ನಿಯಮಕ್ಕನುಸರಿಸಿ ಪರಿಶುದ್ಧತೆಯ ಮಾನವು ಎಲ್ಲ ವರ್ಣಗಳಲ್ಲಿಯೂ ಕಡಿಮೆಯಾಗುತ್ತಬರಲು, ವಿಶ್ವಾಮಿತ್ರ ಕ್ಷತ್ರಿಯನು ಬ್ರಾಹ್ಮಣನಾಗುವದು ಬಹಳ ಕಷ್ಟವಾಗಿ, ಮುಂದೆ ಈ ವರ್ಣಾಂತರದ ಪ್ರಚಾರವನ್ನೇ ಋಷಿಗಳು ನಿಲ್ಲಿಸಿಬಿಟ್ಟಂತೆ ತೋರುತ್ತದೆ.

ಮುಂದೆ ಆ ಚತುರ್ವರ್ಣದವರೂ, ಅವರ ರಾಜರೂ ತಮ್ಮ ಈಶ್ವರನಿರ್ಮಿತ ವರ್ಣಗಳಲ್ಲಿ ಸಂಕರವಾಗದಂತೆ ದಕ್ಷತೆಯಿಂದ ಮನಃಪೂರ್ವಕ ನೋಡಿಕೊಳ್ಳ ಹತ್ತಿದರು. ಒಟ್ಟಿಗೆ, ಈಗ ವೈದಿಕರಿಗೆ ವರ್ಣಾಂತರಮಾಡಲಿಕ್ಕೆ ಬರುವದಿಲ್ಲ. ಯಾವದೊಂದು ವರ್ಣದಿಂದ ಭ್ರಷ್ಟನಾದವನು ನ್ಯಾಯತಃ ಚತುರ್ವರ್ಣ ಭ್ರಷ್ಟನೇ ಆಗುವನಲ್ಲದೆ, ಆ ಭ್ರಷ್ಟನು ಯಾವದೊಂದು ವರ್ಣದಲ್ಲಿ ಗಣಿಸ ಲ್ಪಡಲಾರನು.

ಇನ್ನು, ಭರತಭೂಮಿಯಂತೆ ಉಳಿದ ದೇಶಗಳಲ್ಲಿ ಚತುರ್ವರ್ಣಗಳ ವ್ಯವಸ್ಥೆಯು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ಪಂಗಡ ವಿಭಾಗಿಯಾಗಿ ಇರುವದಂತು ಇರಲಿ, ಅಲ್ಲಿ ಆ ನಾಲ್ಕು ವರ್ಣಗಳ ಹೆಸರು ಕೂಡ ಯಾಕೆ ಉಳಿಯಲಿಲ್ಲವೆಂಬದನ್ನೂ, ಆ ದೇಶಗಳಲ್ಲಿ ಚತುರ್ವರ್ಣಗಳ ಜ್ಞಾನ, ರಕ್ಷಣ, ಪೋಷಣ, ಸೇವಾ ಎಂಬ ಸರ್ವವ್ಯಾಪಿ ಜಗತ್ಕಲ್ಯಾಣಕಾರಕ ವೃತ್ತಿಗಳು ಅನಿಶ್ಚಿತ ಸ್ಥಿತಿಯಲ್ಲಿ ಸದ್ದಿಲ್ಲದೆ ಹೇಗೆ ಇರುವವೆಂಬದನ್ನೂ ಯಥಾ ಮತಿ ತರ್ಕಿಸುವ ಸಾಹಸಮಾಡುವೆವು. ಮನುಷ್ಯರ ಉತ್ಪತ್ತಿಸ್ಥಾನಗಳ ಸಂಬಂಧದಿಂದ ಬೇರೆ ಬೇರೆ ತಾರ್ಕಿಕರ ತರ್ಕಗಳು ಬೇರೆ ಬೇರೆಯಾಗಿರುವವು. ಕೆಲವರು ಆ ಉತ್ಪತ್ತಿಸ್ಥಾನವು ಉತ್ತರಧ್ರುವಪ್ರದೇಶವೆನ್ನುವರು. ಕೆಲವರು, ಮಧ್ಯಏಶಿಯವೆನ್ನುವರು. ಕೆಲವರು ಭರರತಭೂಮಿಯೆನ್ನುವರು. ಇದ ರಂತೆ ಬೇರೆ ಬೇರೆ ತಾರ್ಕಿಕರಿಗೆ ಇನ್ನೂ ಬೇರೆ ಬೇರೆ ಸ್ಥಾನಗಳೂ ಮನುಷ್ಯರ ಉತ್ಪತ್ತಿಸ್ಥಾನಗಳಾಗಿ ತೋರಬಹುದು; ಯಾಕಂದರೆ ನೆಲವಿಗೆ ಹಾರದ ಬೆಕ್ಕು ಸ್ವರ್ಗಕ್ಕೆ ಹಾರಿತೆನ್ನುವಂತೆ, ತನ್ನ ಉತ್ಪತ್ತಿಸ್ಥಾನದ ನಿಶ್ಚಯವನ್ನೇ ಸ್ವಾನುಭವದಿಂದ ಅರಿಯಲಾರದ ಕ್ಷುದ್ರ ಮನುಷ್ಯ ಪ್ರಾಣಿಯು, ಅನಂತಕಾ ಲದ ಹಿಂದಿನ ತನ್ನ ಜಾತಿಯ ಉತ್ಪತ್ತಿಯಸ್ಥಾನವನ್ನು ತರ್ಕದಿಂದ ಗೊತ್ತು ಹಚ್ಚಹೋಗುವದು ಹಾಸ್ಯಾಸ್ಪದವಾಗುವದೇಸರಿ. ಆದರೆ ಮನುಷ್ಯರ ಉತ್ಪ ತ್ತಿಸ್ಥಾನವು ಯಾವದೇ ಇರಲಿ, “ ಆತ್ಮಾ ವೈ ಪುತ್ರ ನಾಮಾಸೀತ್ ” ಎಂಬ ಶ್ರುತಿವಚನದಂತೆ, ಅಥವಾ “ತಂದೆಯಂತೆ ಮಗ,” ಎಂಬ ವಾಡಿಕೆಯ ಲೋಕೋಕ್ತಿಯಂತೆ ಪರಮೇಶ್ವರನ ಆರಂಭದ ಮಕ್ಕಳು ಪರಮೇಶ್ವರನಂತೆ ಪರಿಶುದ್ಧವೃತ್ತಿಯವರೇ ಇದ್ದಿರಬೇಕೆಂದು ತರ್ಕಿಸುವದು ನಿರಾಧಾರವಲ್ಲವು. ಪರಮೇಶ್ವರನ ಸೃಷ್ಟಿಗಳು ಮಾನಸಿಕ, ದೈಹಿಕ, ಮೈಥುನಿಕ ಎಂದು ಮೂರು

ವಿಧಗಳಾಗಿರುವವೆಂದು ಶ್ರೀಮದ್ಭಾಗವತಾದಿ ಗ್ರಂಥಗಳಿಂದ ಗೊತ್ತಾಗುವದೆಂಬ ಮಾತನ್ನು ನಾವು ಹಿಂದೆಯೊಮ್ಮೆ ಹೇಳಿರುವೆವು. ಮಟ್ಟಮೊದಲು ಸೃಷ್ಟಿಕರ್ತಾರನ ಮನಸ್ಸಿಂದ ಉತ್ಪನ್ನರಾದ ಸನಕ--ಸನಂದನ--ಸನಾತನ--ಸನತ್ಕುಮಾರ ಎಂಬ ಮಾನಸ ಪುತ್ರರು ಪರಮೇಶ್ವರನಂತೆ ಕೇವಲ ಪರಿಶುದ್ಧ ಸಾತ್ವಿಕವೃತ್ತಿಯವರೂ, ಜ್ಞಾನಘನರೂ, ನಿವೃತ್ತಿಪರರೂ ಆಗಲು, ಆ ಆತ್ಮಪರಾಯಣರಿಂದ ಸೃಷ್ಟಿಯ ಅಭಿವೃದ್ಧಿಯು ಅಗದಾಯಿತು. ಅದನ್ನು ನೋಡಿ ಸೃಷ್ಟಿಯ ಅಭಿವೃದ್ಧಿಯನ್ನು ಇಚ್ಛಿಸುವ ಸೃಷ್ಟಿಕರ್ತಾರನು ತನ್ನ ದೇಹದ ಬೇರೆಬೇರೆ ಅವಯವಗಳಿಂದ ಬೇರೆ ಬೇರೆ ದೇವತೆಗಳನ್ನೂ, ಸಪ್ತರ್ಷಿಗಳೇ ಮೊದಲಾದವರನ್ನೂ ಉತ್ಪನ್ನಮಾಡಿದನು; ಆದರೂ ಸೃಷ್ಟಿಯವಿಸ್ತಾರವು ಮನಸ್ಸು ದಣಿಯುವಂತೆ ಭರದಿಂದ ಆಗಲೊಲ್ಲದು. ಆಗ ಸೃಷ್ಟಿಕರ್ತಾರನು ಅಸಮಾಧಾನಪಟ್ಟು ಸ್ತ್ರೀಸೃಷ್ಟಿಯನ್ನು ಮಾಡಿ ಆ ಸ್ತ್ರೀಯರ ಯೋಜನೆಯಿಂದ ಸಪ್ತರ್ಷಿ ಮೊದಲಾದವರ ಮಿಥುನಗಳನ್ನುಂಟುಮಾಡಿ, ಆ ಮಿಥುನಗಳ ಇಂದ್ರಿಯವೃತ್ತಿಗಳು "ಪರಾಂಚಿ ಖಾನಿವ್ಯತೃಣತ್ ಸ್ವಯಂಭೂ ಸ್ತಸ್ಮಾತ್ ಪರಾಂಪಶ್ಯತಿನಾಂತರಾತ್ಮನ್" ಎಂಬ ಶ್ರುತಿವಚನದಂತೆ ಬಹಿರ್ಮುಖವಾಗುವಹಾಗೆ, ಅಂದರೆ ವಿಷಯಾಸಕ್ತರಾಗುವಹಾಗೆ ಮಾಡಲು, ಮೈಥುನಸೃಷ್ಟಿಯು ಭರದಿಂದ ಆಗಹತ್ತಿತು.

ಹೀಗೆ ನಾವು ಈಗ ನಮ್ಮ ವೈದಿಕ ಸೃಷ್ಟಿಕ್ರಯಮದ ಉಲ್ಲೇಖಮಾಡಿದ್ದರ ಉದ್ದೇಶವಿಷ್ಟೇ, ಮೊದಲು ಪರಿಶುದ್ಧವಾಗಿದ್ದ ಈಶ್ವರಸೃಷ್ಟಿಯು, ಈಶ್ವರೀಸಂಕೇತದಂತೆ ಅಭಿವೃದ್ಧವಾಗುತ್ತ ಹೋದಹಾಗೆ ಅಪವಿತ್ರವಾಗುತ್ತ ಹೋಯಿತೆಂಬಮಾತು ವಿವೇಕಿಗಳ ಮನಸ್ಸಿನಲ್ಲಿ ಬರಬೇಕೆಂಬದು. ನಮ್ಮ ಈ ಮಾತಿಗೆ ಬಾಯಿಬಲ್ಲಿನ ಆದಮ–ಹವ್ವರ ಕಥೆಯೂ, "ಜೀವನು ಪರಮಾತ್ಮನ ಉಸುರು" ಎಂಬ ಕುರಾಣದ ವಿಚಾರವೂ ಪುಷ್ಟಿಯನ್ನು ಕೊಡುವವು. ಹೀಗೆ ಸೃಷ್ಟಿಯು ಬರಬರುತ್ತ ವಿಷಯಾಸಕ್ತವಾಗುತ್ತ ಹೋದಂತೆ, ಮಲಿನವಾಗುತ್ತ ಹೋಗುವದೇ ವೈದಿಕವಿಚಾರದಂತೆ ಕೃತ–ತ್ರೇತಾ–ದ್ವಾಪರ–ಕಲಿ ಎಂಬ ನಾಲ್ಕು ಯುಗಗಳ ಉತ್ಪತ್ತಿಯ ಕಾರಣವಾಗಿರುವದು. ಈ ಮಾತಿಗೆ ಬಾಯಬಲ್ಲು–ಕುರಾಣ ಮೊದಲಾದ ಬೇರೆ ಧರ್ಮ ಗ್ರಂಥಗಳಲ್ಲಿಯ ವಿಚಾರಸರಣಿಯು ಹೊಂದುತ್ತದೆಂದು ನಮಗೆ ತೋರುತ್ತದೆ, ಇರಲಿ. ನಾವು

ಮೇಲೆ ಹೇಳಿರುವ ವರ್ಣೋತ್ಪಾದಕ ವೈದಿಕ ಋಷಿಗಳ ಉತ್ಪತ್ತಿಯಾದದ್ದು, ಆರಂಭದ ಪರಿಶುದ್ಧವಾದ ಕೃತಯುಗದಲ್ಲಿ, ಅಥವಾ ಸತ್ಯಯುಗದಲ್ಲಿ ಎಂದು ತಿಳಿಯಬೇಕು. ಆ ಸತ್ಯಯುಗದಲ್ಲಿ ಮೈಥುನಸೃಷ್ಟಿಯ ಯೋಗದಿಂದ ಪ್ರಜಾವೃದ್ಧಿಯು ಭರದಿಂದ ಆಗತೊಡಗಲು, ಆ ಅಭಿವೃದ್ಧಪ್ರಜೆಯು ತನ್ನ ಯೋಗಕ್ಷೇಮದ ಸೌಕರ್ಯಕ್ಕಾಗಿ ತಮ್ಮ ಉತ್ಪತ್ತಿಸ್ಥಾನದಿಂದ ನಾಲ್ಕೂಕಡೆಗೆ ಹರಿಬಿದ್ದು ಹೋಗಿರಬಹುದು; ಅಥವಾ ಜೀವನಾರ್ಥ ಕಲಹವು ಉತ್ಪನ್ನವಾಗಿ ಬಲಿಷ್ಠರು ದುರ್ಬಲರನ್ನು ಸ್ಥಾನಬಿಟ್ಟು ಹೊರಗೆ ಹಾಕಿರಬಹುದು. ಅಥವಾ ಮಾನವರು ಬೇರೆಬೇರೆ ಸ್ಥಾನಗಳಲ್ಲಿ ಹುಟ್ಟಿ ಆ ಸ್ಥಾನಗಳಲ್ಲಿ ಹುಟ್ಟಿದ ಇತರ ಪ್ರಾಣಿಗಳಂತೆ ಸ್ವೋದರಪೋಷಿಗಳಾಗಿ ಇದ್ದುಬಿಟ್ಟಿರಬಹುದು. ಹೀಗೆ ನಾಲ್ಕೂ ಕಡೆಗೆ ಚದರಿಹೋದ ಮಾನವರಿಗೆ, ತಮ್ಮ ಐಹಿಕಸುಖಾಭಿವೃದ್ಧಿಯ ಸ್ವಾಭಾವಿಕ ಪ್ರವೃತ್ತಿಯಮೂಲಕವಾಗಿಯಾಗಲಿ, ಭಿನ್ನ ಭಿನ್ನ ಗುಣಧರ್ಮಗಳುಳ್ಳ ಪ್ರದೇಶಗಳ ವಸತಿಯಮೂಲಕವಾಗಿಯಾಗಲಿ, ಈ ಎರಡೂ ಕಾರಣಗಳಿಂದಾಗಲಿ, ಆ ಸತ್ಯಯುಗದ ಮಹಾತ್ಮರಾದ ವೈದಿಕಋಷಿಗಳ ತಪಸ್ಸಾಧ್ಯವಾಗಿದ್ದ ಚತುರ್ವರ್ಣಗಳ ಕೃತ್ರಿಮ ವ್ಯವಸ್ಥೆಯ ವಿಸ್ಮರಣವಾಗಿರಬಹುದು;ಅಥವಾ ಅದರ ಪರಿಜ್ಞಾನವಾಗದೆ ಕೇವಲ ಐಹಿಕ ಸುಖಾನುಕೂಲಸ್ಥಿತಿಗೆ ಅವಶ್ಯವಾದ ಯಾವದೊಂದು ವರ್ಣದ ವೃತ್ತಿಯುಮಾತ್ರ ಆ ದೇಶವಾಸಿಗಳಲ್ಲಿ ಅಭಿವೃದ್ಧವಾಗುತ್ತ ಬಂದಿರಬಹುದು. ಅಂದರೆ ಐಹಿಕ ಸುಖಪ್ರಾಪ್ತಿಗೆ ಬ್ರಾಹ್ಮಣವೃತ್ತಿಯ ಅನುಕೂಲತೆ ತೋರಿದ ದೇಶದಲ್ಲಿ ಬ್ರಾಹ್ಮಣವೃತ್ತಿಯ ಪ್ರಾಬಲ್ಯವೂ, ಕ್ಷಾತ್ರವೃತ್ತಿಯ ಅನುಕೂಲತೆ ತೋರಿದ ದೇಶದಲ್ಲಿ ಕ್ಷಾತ್ರವೃತ್ತಿಯ ಪ್ರಾಬಲ್ಯವೂ, ವೈಶ್ಯವೃತ್ತಿಯ ಅನುಕೂಲತೆ ತೋರಿದ ದೇಶದಲ್ಲಿ ವೈಶ್ಯವೃತ್ತಿಯ ಪ್ರಾಬಲ್ಯವೂ, ಶೂದ್ರವೃತ್ತಿಯ ಅನುಕೂಲತೆ ತೋರಿದ ದೇಶದಲ್ಲಿ ಶೂದ್ರವೃತ್ತಿಯ ಪ್ರಾಬಲ್ಯವೂ ಆಗಿ, ಆ ದೇಶಗಳಿಗೆ ಹೊತ್ತುಬಿದ್ದಂತೆ ಕೊಡೆಹಿಡಿಯುವ ಸ್ಥಿತಿಯು ಪ್ರಾಪ್ತವಾಗಲು, ಅವಶ್ಯವಾದ ವೃತ್ತಿಗಳ ಹೊರತು ಆಯಾ ದೇಶದವರ ಉಳಿದ ವೃತ್ತಿಗಳು ತೇಜೋಹೀನವಾಗತೊಡಗಿರಬಹುದು! ಹೀಗಾಗಿ ಭರತಭೂಮಿಯಂತೆ ಆ ನಾಲ್ಕುವೃತ್ತಿಗಳ ರಕ್ಷಕ ತಪಸ್ವಿ ವರ್ಗವು, ಅಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಪಂಗಡದವರು ಉಳಿದ ದೇಶಗಳಲ್ಲಿ ಉಳಿಯದ್ದರಿಂದ, ಆ ಉಳಿದ ದೇಶಗಳಲ್ಲಿ ನಾಲ್ಕೂವರ್ಣಗಳ ಅಭಿವೃ

ದ್ಧಿಯು ಭರತಭೂಮಿಯಲ್ಲಿಯಂತೆ ಸರಿಯಾಗಿ ಆಗದೆ ಹೋಗಲು, ಆ ದೇಶಗಳಲ್ಲ ವರ್ಣಗಳು ವಿಂಗಡವಾಗಿ ಉಳಿಯದೆ, ಅವುಗಳ ಹೆಸರುಗಳೂ ಅಳಿದು ಹೋಗಿ, ಪ್ರಾಮುಖ್ಯವಾಗಿ ಐಹಿಕ ಸುಖಪ್ರಾಪ್ತಿಯವುಟ್ಟಿಗೆ ಆ ಚಾತುರ್ವರ್ಣ್ಯದ ವೃತ್ತಿಗಳು ಮಾತ್ರ ಒಬ್ಬ ವ್ಯಕ್ತಿಯಲ್ಲಿಯಂತೆ ಪ್ರಸಂಗತಃ ಕಾರ್ಯಮಾಡತೊಡಗಿರಬಹುದು; ಆದ್ದರಿಂದ ಆ ಉಳಿದ ದೇಶದವರಿಗೆ ಚತುರ್ವರ್ಣಗಳ ಅವಶ್ಯಕತೆಯೂ, ತನ್ಮೂಲವಾದ ಧರ್ಮಮಯತೆಯ ಆವಶ್ಯಕತೆಯೂ ಸ್ವಾಭಾವಿಕವಾಗಿಯೇ ಉಳಿದಿರಲಿಕ್ಕಿಲ್ಲ; ಅಥವಾ ಐಹಿಕಸುಖದ ಆಶೆಯಿಂದ ಅವರು ಬುದ್ಧಿಪೂರ್ವಕವಾಗಿಯೇ ಆ ಚತುರ್ವರ್ಣಗಳನ್ನು ದುರ್ಲಕ್ಷಿಸಿರಬಹುದು. ಇದರಿಂದ ಭರತಭೂಮಿಯಿಂದ ಹೊರತಾದ ಆ ದೇಶಗಳಲ್ಲಿ ಕೆಲವು, ತೇಜಸ್ವಿಗಳಾದ ಬ್ರಾಹ್ಮಣವೃತ್ತಿ ಪ್ರಧಾನ ದೇಶಗಳು, ಕೆಲವು ಕ್ಷಾತ್ರವೃತ್ತಿ ಪ್ರಧಾನ ದೇಶಗಳು, ಕೆಲವು ವೈಶ್ಯವೃತ್ತಿ ಪ್ರಧಾನ ದೇಶಗಳು, ಕೆಲವು ಶೂದ್ರವೃತ್ತಿ ಪ್ರಧಾನ ದೇಶಗಳು ಅನುಸುತ್ತಿರಬಹುದಲ್ಲದೆ, ಭರತಭೂಮಿಯಂತೆ ಧರ್ಮಮಯವಾದ ಚಾತುರ್ವರ್ಣ್ಯಪ್ರಧಾನ ದೇಶಗಳೆನಿಸಿಕೊಳ್ಳದಿರುವದು ಸ್ವಾಭಾವಿಕವೇ ಸರಿ!

ಹೀಗ ಜಗತ್ಕಲ್ಯಾಣಕಾರಕಗಳಾದ ಆ ನಾಲ್ಕು ವರ್ಣವೃತ್ತಿಗಳು ಭರತಭೂಮಿಯಲ್ಲಿ ಮಾತ್ರ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ಸಂಘನಿಷ್ಠಗಳಾಗಿಯೂ, ಉಳಿದ ದೇಶಗಳಲ್ಲಿ, ಅದೇಕೆ, ಭರತಭೂಮಿಯಲ್ಲಿ ಕೂಡ ಕೆಲವು ಜಾತಿಗಳಲ್ಲಿ ವ್ಯಕ್ತಿನಿಷ್ಠಗಳಾಗಿಯೂ ಇರುತ್ತವೆಂದು ತಿಳಿಯತಕ್ಕದ್ದು. ಒಟ್ಟಿಗೆ ಜಗತ್ತಿನಲ್ಲಿ ಸಂಘನಿಷ್ಠ ವರ್ಣವೃತ್ತಿಗಳುಳ್ಳವರ ಪ್ರಮಾಣವು ತೀರ ಅಲ್ಪಸಂಖ್ಯಾಕವಾಗಿಯೂ, ವ್ಯಕ್ತಿನಿಷ್ಠ ವರ್ಣವೃತ್ತಿಗಳುಳ್ಳವರ ಪ್ರಮಾಣವು ಬಹು ಸಂಖ್ಯಾಕವಾಗಿಯೂ ಇದ್ದು, ಆ ಸಂಘನಿಷ್ಠವರ್ಣವೃತ್ತಿಯ ಜನರಿಗೆ ಸನಾತನಧರ್ಮಿಗಳು, ಅಥವಾ ಸನಾತನಿಗಳು ಅನ್ನುವ ವಾಡಿಕೆಯಿರುತ್ತದೆ. ತಮ್ಮ ತಪೋವೃತ್ತಿಯಿಂದ ತಮ್ಮ ನಾಲ್ಕುವರ್ಣಗಳ ಆ ನಾಲ್ಕುವೃತ್ತಿಗಳನ್ನು ಸೃಷ್ಟಿಯ ಆದಿಯುಸತ್ಯಯುಗದಿಂದ ಆರಂಭಿಸಿ ಇಲ್ಲಿಯವರೆಗೆ ನಿಸ್ವಾರ್ಥಬುದ್ಧಿಯಿಂದ ಪರಿಶುದ್ಧವಾಗಿ ಕಾಯುತ್ತಬಂದಿದ್ದ ಇವರಿಗೆ, ಸನಾತನಿಗಳೆಂಬ ಹೆಸರು ಬಂದದ್ದು ಅಯತಾರ್ಥವಲ್ಲ; ಮತ್ತು ಈಗಿನ ವರ್ಣತಿರಸ್ಕಾರದ ಹೀನಕಾಲದಲ್ಲಿ ಈ ಸನಾತನಿಗಳಿಗೆ, ಕಟ್ಟಾಟರರು, ಹಟಮಾರಿಗಳು ಎಂದು ಕರೆಯುವದರಲ್ಲಿಯೂ ಅಯಥಾರ್ಥ

ತೆಯಿರುವದಿಲ್ಲ. ಸನಾತನಿಗಳ ಈ ಹಟಮಾರಿತನ-ಕಠೋರತನಗಳಿಂದಲೇ ವರ್ಣಗಳ ಪರಿರಕ್ಷಣ-ಪರಿಪೋಷಣ-ಪರಿವರ್ಧನಗಳಾಗುತ್ತ ಬಂದಿರುವವೆಂದು ತಿಳಿಯತಕ್ಕದ್ದು; ಮತ್ತು ತಮ್ಮ ವರ್ಣಗಳ ರಕ್ಷಣದ ಸಂಬಂಧದ ಈ ಹಟಮಾರಿತನವನ್ನು ಅವರು ಇನ್ನು ಮುಂದಾದರೂ ತಾಳುವದು, ವರ್ಣರಕ್ಷಣದಸಂಬಂಧದ ಅವರ ಪವಿತ್ರಕರ್ತವ್ಯವಾಗಿರುವದು. ಹೀಗೆ ಸನಾತನಿಗಳ ಕೃತ್ರಿಮಗಳಾದ ವರ್ಣಗಳ ಪಾಲನವು ತಪಸ್ಸಾಧ್ಯವಾಗಿರುವದರಿಂದಲೂ, ಅವರ ವರ್ಣಪಾಲನದ ಹೇತುವಿನಲ್ಲಿ ಪಾರತ್ರಿಕ ಸುಖೋನ್ಮುಖವಾದ ಐಹಿಕ ಸುಖಸಾಧನದ, ಹಾಗು ಅಂತಿಮ ಮೋಕ್ಷಸಾಧನದ ಗುರಿಯು ಇರುವದರಿಂದಲೂ ಅವರ ಆ ವರ್ಣಪಾಲನವು ಅತ್ಯಂತ ಕಷ್ಟಸಾಧ್ಯವಾಗಿರುವದು. ಅದು ಸುಖೋತ್ಪಾದಕ ಸ್ವರೂಪದ್ದಾಗಿರದೆ ಕರ್ತವ್ಯಪಾಲನದ ಸ್ವರೂಪದ್ದಾಗಿರುವದರಿಂದ, ಶ್ರೀ ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಪರಮಾತ್ಮನು ಹೇಳಿದ "ಸುಖದುಃಖೇ ಸಮೇಕೃತ್ವಾ ಲಾಭಾಲಾಭೌ ಜಯಾಜಯೌ। ತತೋಯುದ್ಧಾಯ ಯುಜ್ಯಸ್ವ ನೈವಂಪಾಪಮವಾಪ್ಸ್ಯಸಿ॥ ಎಂಬ,ಅಂದರೆ, ಸುಖದುಃಖ-ಲಾಭಾಲಾಭಗಳನ್ನು ಸಮವಾಗಿತಿಳಿದು ಯುದ್ಧ ಮಾಡಿದರೆ ನೀನು ಪಾಪಿಯಾಗುವದಿಲ್ಲ ಎಂಬ ಈ ಉಕ್ತಿಯಂತೆ ಅತ್ಯಂತ ಪವಿತ್ರವೂ ಗಂಭಿರವೂ ಆಗಿರುದದು! "ಅದ್ಯೈವವಾ ಮರಣಮಸ್ತು ಯುಗಾಂತರೇವಾ" ಎಂಬ ನಿಗ್ರಹದ ಉಕ್ತಿಯಂತೆ, ತಮ್ಮ ದೇಹದ ಪರಿವೆಕೂಡಯಿಲ್ಲದೆ ಅತ್ಯಂತ ನಿಗ್ರಹದಿಂದ ತಮ್ಮ ತಮ್ಮ ವರ್ಣಧರ್ಮಗಳನ್ನು ಧರ್ಮಸೇವೆಯೆಂದು, ಅಥವಾ ಭಗವತ್ಸೇವೆಯೆಂದು ಸನಾತನಿಗಳು ಪಾಲಿಸಬೇಕಾಗುವದು! ಅಂದಬಳಿಕ ಅವರಿಗೆ ಸರ್ವಪ್ರಿಯವಾದ ಐಹಿಕಸುಖಕ್ಕೆ ಪ್ರಸಂಗವಶಾತ್ ತಿಲಾಂಜಲಿಬಿಡದಿದ್ದರೆ ವರ್ಣಧರ್ಮಪಾಲನವು ಹೇಗಾದೀತು? ಈಮಾತಿಗೆ ಶ್ರೀಮನ್ಮಹಾಭಾರತದಲ್ಲಿಯ ಸನಾತನಧರ್ಮಿಗಳಾದ ಪಾಂಡವರ ಆಚರಣೆಯೇ ಉದಾಹರಣವಾಗಿರುವದು.

ಆದರೆ ವರ್ಣಪಾಲನದ ಈ ಕಷ್ಟತರ ತಪಶ್ಚರ್ಯವನ್ನು ಸನಾತನ ಧರ್ಮೇತರರಿಗೆ ಮಾಡುವ ಕಾರಣವಿಲ್ಲ. ಈ ಕಠಿಣತರ ತಪಶ್ಚರ್ಯವು ಸನಾತನಿಗಳಲ್ಲಿ ನಷ್ಟವಾಗುತ್ತ, ಅವರಲ್ಲಿ ಅನಾಚಾರವು ಪ್ರಬಲವಾಗುತ್ತ ಹೋದಾಗ, ಅಥವಾ ಅವರು ಸನಾತನಿಗಳಾಗಿರಲಿಕ್ಕೆ ಅನರ್ಹರಾಗುವಷ್ಟು ಸ್ವಾರ್ಥಪರಾಯಣರಾದಾಗ, ಇದೇ ಭರತಭೂಮಿಯಲ್ಲಿ ಭಗವಾನ್ ಬುದ್ಧ,

ಶ್ರೀ ಬಸವೇಶ್ವರ ಮೊದಲಾದ ಈಶ್ವರಾಂಶರು ಆ ತಪೋಭ್ರಷ್ಟ ಅನಾಚಾರಿಗಳ, ಹಾಗು ಉಳಿದ ವ್ಯಕ್ತಿನಿಷ್ಠವರ್ಣವೃತ್ತಿಯ ಮಾನವರ ಕಲ್ಯಾಣಕ್ಕಾಗಿ ವರ್ಣಾಶ್ರಮವಿಹೀನವಾದ ಸುಲಭಾಚರಣೆಯ ತಾರಕಧರ್ಮಗಳನ್ನು ತಮ್ಮ ದಿವ್ಯಪ್ರಭಾವದಿಂದ ಸ್ಥಾಪಿಸಿ ಜಗತ್ಕಲ್ಯಾಣವನ್ನು ಮಾಡಿದರು. ಅದರಂತೆ ಭಾರತೇತರ ಉಳಿದದೇಶಗಳಲ್ಲಿಯ ವರ್ಣಾಶ್ರಮವಿಹೀನರಾದ ಮಾನವಸಾಮಾನ್ಯರ ಕಲ್ಯಾಣ–ಉದ್ಧಾರಗಳಿಗಾಗಿ ಮಹಾತ್ಮರಾದ ಏಸೂಕ್ರಿಸ್ತ, ಮಹಮ್ಮದ ಪೈಗಂಬರ ಮೊದಲಾದ ಈಶ್ವರ ವಿಭೂತಿಗಳು ಭಿನ್ನ ಭಿನ್ನ ತಾರಕಧರ್ಮಮಾರ್ಗಗಳನ್ನು ತೋರಿಸಿರುವರು. ಮಹಾತ್ಮರಾದ ಈ ಎಲ್ಲ ಈಶ್ವರವಿಭೂತಿಗಳ ಧರ್ಮಗಳು, ಸರ್ವಜನ ಸುಲಭವಲ್ಲದ ವರ್ಣಾಶ್ರಮ ಧರ್ಮಪಾಲನದ ಕಷ್ಟವನ್ನು ತಪ್ಪಿಸಿದ್ದರಿಂದ, ಆ ಸುಲಭಧರ್ಮಗಳು ಜಗದ್ವ್ಯಾಪಿಯಾಗಿ ಬಹುಪ್ರಮಾಣದಿಂದ ಹಬ್ಬಿಕೊಂಡದ್ದರಲ್ಲಿ ಆಶ್ಚರ್ಯವಿಲ್ಲ. ಒಟ್ಟಿಗೆ, ಸೃಷ್ಟಿಯ ಎರಡು ಪವಿತ್ರ ಘಟಕಗಳಾಗಿರುವ ವರ್ಣಾಶ್ರಮಯುಕ್ತಧರ್ಮ, ವರ್ಣಾಶ್ರಮವಿಹೀನಧರ್ಮ ಇವೆರಡರಲ್ಲಿ ವಿವೇಕಿಗಳು ಯಾವದನ್ನೂ ಎತ್ತಿ ಎಣಿಸುವ ಕಾರಣವಿಲ್ಲ. ಅವೆರಡು ಅವವುಗಳಪರಿಯಿಂದ ಜಗತ್ಕಲ್ಯಾಣಸಮರ್ಥಗಳಾಗಿಯೇ ಇರುವವು; ಯಾಕಂದರೆ ಅವೆರಡು ಘಟಕಗಳಪ್ರವರ್ತಕನೂ, ಅಭಿಮಾನಿಯೂ, ಪಾಲಕನೂ ಪರಮೇಶ್ವರನೇ ಆಗಿರುವದರಿಂದ, ಆಉಭಯಘಟಕಗಳು ಅವರವರಿಗೆ ನಾವು ಮೇಲೆ ಹೇಳಿದಂತೆ ಅವರವರ ಪರಿಯಿಂದ ತಾರಕಗಳೇ ಆಗಿರುವವೆಂದು ತಿಳಿಯತಕ್ಕದ್ದು. ಇದಲ್ಲದೆ ಆ ಉಭಯಧರ್ಮಗಳಲ್ಲಿಯೂ ಧರ್ಮಗ್ಲಾನಿಯಾದಾಗೆಲ್ಲ ಧರ್ಮಪ್ರವರ್ತಕರಾದ ಈಶ್ವರಾಂಶರೂ, ಮಹಾಪುರುಷರೂ, ಮಹಿಮಾಶಾಲಿಗಳೂ, ಸತ್ಪುರುಷರೂ ಉದಯಹೊಂದುತ್ತಬರುತ್ತಿರುವರು. ಇದೂ ಅಲ್ಲದೆ ಆ ಉಭಯಧರ್ಮದವರಲ್ಲಿ ನ್ಯಾಯಪ್ರಿಯ ಪ್ರಜಾರಂಜಕರಾಜರೂ, ವೀರಪುರುಷರೂ, ಕರ್ತೃತ್ವಶಾಲಿಗಳೂ, ವ್ಯವಹಾರಕುಶಲರೂ, ಕಲಾಪ್ರವೀಣರೂ, ತತ್ವಜ್ಞರೂ ಉದಯಹೊಂದುತ್ತಬಂದಿರುವರು. ಇದನ್ನೆಲ್ಲ ಮನಸ್ಸಿನಲ್ಲಿತಂದು, ಹಿಂದೆ ಹೇಳಿಂತೆ ಉಭಯಧರ್ಮಗಳೂ ಜಗತ್ಕಲ್ಯಾಣಕಾರಕಗಳೇ ಆಗಿರುವವೆಂದು ನಂಬಿ, ಅವರವರು ತಮ್ಮ ತಮ್ಮ ಧರ್ಮಗಳಲ್ಲಿ ನಿಷ್ಠೆಯಿಟ್ಟು ಸ್ವಾಚಾರಪರರಾಗಿ ಪರಧರ್ಮಸಹಾನುಭೂತಿಯನ್ನೂ, ಸೌಹಾರ್ದತೆಯನ್ನೂ ತಾಳಿ ಕೃತಕೃತ್ಯರಾಗಬೇಕಲ್ಲದೆ, ಉಭಯಧರ್ಮಭ್ರ

ಷ್ಟತೆಯಿಂದ ಪಶುಪ್ರಾಯರಾಗಿ ಕೆಟ್ಟುಹೋಗಬಾರದು.

ಹೀಗೆ ಉಭಯಧರ್ಮಗಳೂ ಕಲ್ಯಾಣಕಾರಕಗಳಾಗಿಯೇ ಇದ್ದರೂ, ವರ್ಣಾಶ್ರಮ ಧರ್ಮಪಾಲನಕ್ಕಾಗಿಯಾವಾಗಲೂ ವ್ರತಸ್ಥರಾಗಿರುವ ಸನಾತನಿಗಳ ಸ್ಥಿತಿಯಲ್ಲಿಯೂ, ಆ ವ್ರತವನ್ನು ಪಾಲಿಸದಿರುವ ಸನಾತನೇತರರ ಸ್ಥಿತಿಯಲ್ಲಿಯೂ ಸ್ವಪರಹಿತ ಸಾಧಘಟಕಸಮುಚ್ಚಯವು ಎಷ್ಟರಮಟ್ಟಿಗೆಆಗಿರುವದೆಂಬದರ ವಿಚಾರವನ್ನು ಅವರವರು ಪ್ರಾಂಜಲಮನಸ್ಸಿನಿಂದ ತಮ್ಮತಮ್ಮೊಳಗೆ ತಮ್ಮ ತಮ್ಮ ಅನುಭವತರ್ಕಗಳಿಂದ ಮಾಡಿಕೊಳ್ಳತಕ್ಕದ್ದು; ಆದರೆ ಆ ವಿಚಾರಗಳದಿಗ್ದರ್ಶನಕ್ಕಾಗಿ ಆ ಸ್ವಪರಹಿತ ಸಾಧಕ ಘಟಕಗಳಲ್ಲಿಯ ಕೆಲವು ಘಟಕಗಳ ಉಲ್ಲೇಖವನ್ನು ಮಾತ್ರ ನಾವು ಇಲ್ಲಿ ಮಾಡುವೆವು— ೧ ಯಾವದರಲ್ಲಿ ಪರಧರ್ಮ ಸಹಿಷ್ಣುತಾಪೂರ್ವಕ ಸ್ವಧರ್ಮನಿಷ್ಠೆಗೆ ಹೆಚ್ಚು ಆಸ್ಪದವಿರುವದು? ೨ ಯಾವದರಲ್ಲಿ ತ್ರಿಕರಣಗಳ ಪಾವಿತ್ರ್ಯವನ್ನು ಕಾಯ್ದುಕೊಳ್ಳುವದಕ್ಕಾಗಿ ಪವಿತ್ರವಾದ ಸಾತ್ವಿಕ–ಆಹಾರ–ವಿಹಾರ–ವ್ಯವಹಾರಗಳ ಬಳಿಕೆಗೆ ಆಸ್ಪದವು ಹೆಚ್ಚು ಇರುವದು? ೩ "ಅವರವರದು ಅವರವರಿಗೆ ನೆಟ್ಟಗೆ" ಎಂಬ ಶಾಂತಿಪ್ರಸ್ಥಾಪಕ ತತ್ವಕ್ಕನುಸರಿಸಿ, ನಿಷ್ಕಾರಣ ಮಂದಿಯ ಧರ್ಮದಲ್ಲಿಕೈಹಾಕದೆ ತನ್ನಷ್ಟಕ್ಕೆ ತಾನಿರುವದಕ್ಕೆ ಯಾವದರಲ್ಲಿ ಹೆಚ್ಚು ಆಸ್ಪದವಿರುತ್ತದೆ? ೪ ಧರ್ಮಾರ್ಥಿಗಳಾಗಿ ಬಂದವರಿಗೆ, ಅಥವಾ ಹಾದಿಸಿಗದೆ ತೊಳಲಾಡುವವರಿಗೆ ಮಾತ್ರ, ತಮ್ಮ ಪಾವಿತ್ರ್ಯಕ್ಕೆ ಬಾಧೆ ತಂದುಕೊಳ್ಳದೆ, ಅವರವರ ಯೋಗ್ಯತೆಯಂತೆ ಧರ್ಮತತ್ವಗಳ ಉಪದೇಶಮಾಡಿ, ಅವರದೊಂದು ಪಂಗಡವನ್ನು ತಮ್ಮದಾಗಿ ಮಾಡಿಕೊಂಡರೂ, ಪರಸ್ಪರ ಸಂಕರಕ್ಕೆ ಆಸ್ಪದಕೊಡದಿರುವ ನಿರ್ದುಷ್ಟವಾದ ದಿವ್ಯ ಸಾಮರ್ಥ್ಯವು ಯಾತರಲ್ಲಿ ಹೆಚ್ಚು ಇರುತ್ತದೆ? ೫ ಸರ್ವಧರ್ಮಗಳೂ ಆವವುಗಳ ಪರಿಯಿಂದ ಕಲ್ಯಾಣ ಕಾರಕಗಳೇ ಆಗಿರುವವೆಂಬ ಸಮತೆಯ ಸದ್ಭಾವಕ್ಕೆ ಆಸ್ಪದ ದೊರೆತು, ಧರ್ಮ ಪ್ರಸಾರಕ್ಕಾಗಿ ರಕ್ತಸುರಿಸುವ, ಅಥವಾ ಆಶೆ–ಬಲಾತ್ಕಾರಾದಿ ಹೀನ ಉಪಾಯಗಳನ್ನು ಯೋಜಿಸುವ ಪ್ರಚಾರವು ಯಾವದರಲ್ಲಿ ಕಡಿಮೆಯಿರುತ್ತದೆ? ೬ ಎಲ್ಲ ವ್ಯವಹಾರಗಳನ್ನು ಆಧ್ಯಾತ್ಮಿಕೋನ್ನತಿಯ ಗುರಿಯಿಂದ ಮಾಡುವ ಶೀಲದ ಅಭಿವೃದ್ಧಿಯಾಗಲಿಕ್ಕೆ ಯಾವದರಲ್ಲಿ ಹೆಚ್ಚು ಆಸ್ಪದವಿರುತ್ತದೆ? ೭ ಅಂತರಂಗವು ಧರ್ಮಮಯವಾಗಿರದೆ ಬಹಿರಂಗದ ಧರ್ಮದೀಕ್ಷೆಹೊಂದಿ ಬಂದು ತುಂಬಿಕೊಳ್ಳುವ ಹಸಿಬಿಸಿ ಜನರಿಂದ, ಮೂಲಧರ್ಮವೇ ಹಸಗೆಡ

ಲಿಕ್ಕೆ ಆಸ್ಪದವು ಯಾತರಲ್ಲಿ ಕಡಿಮೆಯಿರುತ್ತದೆ? ೮ "ಜತೆಯಂತೆ ಮತಿ" ಎಂಬ ಸಿದ್ಧಾಂತದಂತೆ, ಅಪವಿತ್ರಾಹಾರಸ್ಪರ್ಶ, ಅಪವಿತ್ರವಸ್ತುಸ್ಪರ್ಶ, ಅಪವಿತ್ರಜನಸ್ಪರ್ಶ, ಅಪವಿತ್ರಗುಣಸ್ಪರ್ಶ, ಅಪವಿತ್ರ ವಿಚಾರಸ್ಪರ್ಶಗಳಿಗೆ ಅಂಜಿ ದೂರವಾಗಿದ್ದು, ಯಾವಾಗಲೂ ಅಂತರ್ಮುಖವಾಗಿ ಜೀವಿಸುವ ಮನೋವೃತ್ತಿಯ ಪರಿಪೋಷಣಕ್ಕೆ ಯಾತರಲ್ಲಿ ಹೆಚ್ಚು ಅನುಕೂಲವಿರುತ್ತದೆ? ೯ ಕರ್ಮದಿಂದ ದೇಹಶುದ್ಧಿ, ಭಕ್ತಿಯಿಂದ ಮನಶ್ಶುದ್ಧಿ, ಜ್ಞಾನದಿಂದ ಆತ್ಮಶುದ್ಧಿ ಇವು ಆಗುತ್ತಿರುವದರಿಂದ, ಈ ಮೂರೂ ಶುದ್ಧಿಗಳ ಪ್ರಾಪ್ತಿಗೆ ಅವಶ್ಯವಾದ ಕರ್ಮ–ಭಕ್ತಿ–ಜ್ಞಾನಗಳೆಂಬ ಮೂರು ಸಾಧನಗಳು ಅಧಿಕಾರ ಭೇದದಿಂದ ಹೆಚ್ಚು ಕಡಿಮೆ ಪ್ರಮಾಣದಿಂದಲೇ ಆಗಲೊಲ್ಲದೇಕೆ, ಬದ್ಧ–ಮುಮುಕ್ಷು–ಮುಕ್ತರಿಗೂ ಬೇಕೆಂದು ಯಾವಧರ್ಮವು ವಿಶೇಷವಾಗಿ ಪ್ರತಿಪಾದಿಸುತ್ತದೆ? ೧೦ ಶ್ರೇಷ್ಠಾಧಿಕಾರಿಗಳಂತೆ ಒಮ್ಮೆಲೆ ಭಗವತ್ಸ್ವರೂಪಕ್ಕೆ ಮುಗಿಬಿದ್ದು ಅನ್ಯದೇವತೆಗಳನ್ನು ತಿರಸ್ಕರಿಸದೆ, ಆಬ್ರಹ್ಮಸ್ತಂಬಪರ್ಯಂತವಾಗಿ ಎಲ್ಲವೂ ಭಗವದ್ರೂಪವೆಂದು ತಿಳಿದು, ತನ್ನ ನಿತ್ಯನೈಮಿತ್ತಿಕ ಕರ್ಮಗಳಿಂದ ಸತತವಾಗಿ "ಪಿಪೀಲಿಕಾ ಕೀಟ ಪತಂಗಕಾದ್ಯಾ" ಇತ್ಯಾದಿ ಉಕ್ತಿಯಂತೆ ಪಾಮರ ಜೀವಿಗಳಿಂದ ಕೃತಾರ್ಥ ಜೀವಿಗಳ ವರೆಗೆ ಎಲ್ಲವನ್ನು ಸಮಬುದ್ಧಿಯಿಂದ ಸಂತೋಷ ಪಡಿಸುವ ಪ್ರವೃತ್ತಿಗೆ ಯಾವದರಲ್ಲಿ ಹೆಚ್ಚು ಆಸ್ಪದವಿರುತ್ತದೆ? ಇತ್ಯಾದಿ ಇತ್ಯಾದಿ ಪ್ರಸಂಗಳವಿಚಾರವನ್ನು ಸನಾತನರೂ, ಸನಾತನೇತರರೂ ತಮ್ಮೊಳಗೆ ಮಾಡಿಕೊಂಡು, ಸ್ವಧರ್ಮನಿಷ್ಠೆಯನ್ನೂ, ಪರಧರ್ಮಸಹಿಷ್ಣುತೆಯನ್ನೂ ತಾಳಿ, ಧರ್ಮಲಂಡತನಕ್ಕೆ ಆಸ್ಪದಕೊಡದೆ ಶಾಂತಿಯಿಂದ ಬಾಳತಕ್ಕದ್ದು.

**ಜಾತಿಗಳು**—ಇವು ಈಶ್ವರನಿರ್ಮಿತಗಳಲ್ಲ, ಮನುಷ್ಯಕೃತಗಳು. ಹೊಸ ಹೊಸ ಜಾತಿಗಳ ಉತ್ಪತ್ತಿಯು ಈಗಲೂ ಆಗುತ್ತಿರಬಹುದು. ಇವುಗಳ ಉತ್ಪತ್ತಿಗೆ ಉದ್ಯೋಗಭೇದ, ವಾಸಸ್ಥಳಭೇದ, ಕರ್ಮಭೇದ, ಆಚಾರಭೇದ, ವಿಚಾರಭೇದ, ಸಹವಾಸಭೇದ, ಭಾಷಾಭೇದ, ಹವಾಮಾನಭೇದ, ಪ್ರಾಕೃತಿಕಸ್ವರೂಪಭೇದ, ಉಪಜೀವನಸಾಧನಗಳ ಅನುಕೂಲತೆ–ಪ್ರತಿಕೂಲತೆಗಳಭೇದ ಮುಂತಾದ ಹಲವು ಬಾಹ್ಯಸಂಬಂಧಗಳು ಕಾರಣವಾಗಿರುವವು. ಈ ಕಾರಣಗಳಮೂಲಕ ಚತುರ್ವರ್ಣದವರಲ್ಲಿಯೂ, ವರ್ಣಹೀನರಲ್ಲಿಯೂ ಹಲವು ಜಾತಿಗಳು ಉಂಟಾಗಿರುವವು. ಬ್ರಾಹ್ಮಣರಲ್ಲಿಯು—ಪಂಚಗೌಡ,

ಪಂಚದ್ರಾವಿಡ, ಕೊಂಕಣಸ್ಥ, ದೇಶಸ್ಥ, ಕರ್ನಾಟಕ, ಕರಹಾಡೆ, ಗುರ್ಜರ, ಹವ್ಯಕ, ಸಾರಸ್ವತ, ಸವ್ವಾಶೆ, ಶೇಣವಿ ಇತ್ಯಾದಿ ಅನೇಕಜಾತಿಗಳಿರುವವು. ಇದರಂತೆ ಕ್ಷತ್ರಿಯ, ವೈಶ್ಯ, ಶೂದ್ರವರ್ಣಗಳಲ್ಲಿಯೂ ಹಲವುಜಾತಿಗಳಿರುವದನ್ನು ಅವರವರು ಕಂಡುಕೊಳ್ಳಬಹುದು. ಇದಲ್ಲದೆ, ಉದಾರರಾದ ವೈದಿಕರು ವರ್ಣಸಂಕರದ್ವೇಷಿಗಳಾಗಿದ್ದರೂ, ಬೇರೆ ಬೇರೆ ವರ್ಣಹೀನಮನುಷ್ಯಪಂಗಡಗಳಿಗೆ ಅವುಗಳ ಇಚ್ಛೆಯಂತೆ ಅವವುಗಳ ಅಧಿಕಾರನೋಡಿ ವೈದಿಕ ದೇವತೆಗಳ ಉಪಾಸನಾದಿಗಳನ್ನು ಉಪದೇಶಿಸಿ, ವೈದಿಕಧರ್ಮದವರನ್ನಾಗಿ ಮಾಡಿಕೊಂಡು ಆ ಪಂಗಡಗಳನ್ನು ಹಿಂದೂಜಾತಿಗಳಲ್ಲಿ ಸೇರಿಸಿಕೊಂಡರು. ಇದರಂತೆ ಅಸ್ಪೃಶ್ಯ ವರ್ಗಗಳನ್ನು ಕೂಡ ವೈದಿಕರು ತಮ್ಮ ಧರ್ಮದವರನ್ನಾಗಿ ಮಾಡಿಕೊಂಡು, ತಮ್ಮ ಪಾವಿತ್ರ್ಯಕ್ಕೆ ಬಾಧೆಬಾರದಂತೆ ಅವರೊಡನೆ ಸಂಬಂಧ ಬಳಿಸಿದರು. ಹೀಗೆ ತಮ್ಮ ವರ್ಣಗಳ ಸಂಕರಕ್ಕೆ ಆಸ್ಪದವಾಗದಂತೆ, ಹಾಗು ಹೊಸ ಹಳೆ ಜಾತಿಗಳ ಪರಸ್ಪರ ಸಂಕರವಾಗದಂತೆ ಬೇರೆ ಬೇರೆ ವೈದಿಕ ಜಾತಿಗಳನ್ನು ಏರ್ಪಡಿಸುವ ಪರಿಶುದ್ಧಪದ್ಧತಿಯು, ವೈದಿಕರ ಹೊರತು ಜಗತ್ತಿನೊಳಗಿನ ಬೇರೆ ಯಾವಧರ್ಮದವರಿಗೂ ಸಾಧಿಸಿದಂತೆ ತೋರುವದಿಲ್ಲ. ಈ ಜಾತಿಗಳು ಕೃತಕಗಳಾದದ್ದರಿಂದ ವೈದಿಕರಿಗೆ ಅವು ಈಶ್ವರಕೃತವರ್ಣಗಳಿಗಿಂತ ಗೌರವ ಹೀನಗಳಾಗಿರುವವು. ವೈದಿಕರಲ್ಲಿಯ ಜಾತಿಗಳು ವರ್ಣಾಂತರ್ಗತಗಳಾದದ್ದರಿಂದ, ಜಾತ್ಯಂತರ ಮಾಡಿದರೆ ವರ್ಣಾಂತರಮಾಡಿದಂತೆ ಆಗುವ ಕಾರಣ ಜಾತ್ಯಂತರಕ್ಕೂ ವೈದಿಕರಲ್ಲಿ ಆಸ್ಪದವಿಲ್ಲವು. ಆದರೆ ಪ್ರಸಂಗವಶಾತ್ ಸನಾತನಿಗಳು ವರ್ಣಾಭಿಮಾನದಲ್ಲಿ ತಮ್ಮ ಜಾತ್ಯಭಿಮಾನವನ್ನು ಶಿಥಿಲ ಮಾಡಿಕೊಳ್ಳ ಬಹುದು, ಆದರೆ ಜಾತ್ಯಭಮಾನದಿಂದ ವರ್ಣಾಭಿಮಾನವನ್ನು ಕಳೆದು ಕೊಳ್ಳಲಿಕ್ಕೆ ಪ್ರಾಮುಖ್ಯವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ತ್ರೈವರ್ಣಿಕರು ಸರ್ವಥಾ ಒಪ್ಪಲಾರರು. ಒಟ್ಟಿಗೆ, ವರ್ಣಗಳು ವೈದಿಕರ ಅಂಗಗಳು; ಜಾತಿಗಳು ವೈದಿಕರಿಗೆ ಅಂಗೀಕೃತಗಳು.

**ಕುಲಗಳು**—ಇನ್ನು ಕುಲಗಳ ಸಂಬಂಧದಿಂದ ವಿಚಾರಮಾಡುವಾ. ಮಹಾತ್ಮರು, ಮಹಾಪುರುಷರು, ಮಹಾತೇಜಸ್ವಿಗಳು, ಮಹಾಪ್ರತಾಪವಂತರು, ಇತ್ಯಾದಿ ಘನವಾದ ಯೋಗ್ಯತೆಯ ಜನರ ವಂಶಗಳಿಗೆ ಕುಲಗಳೆನ್ನುವರು. ಈ ಕುಲಗಳು ಜಾತ್ಯಂತರ್ಗತಗಳಾಗಿದ್ದು, ಒಂದು ಜಾತಿಯಲ್ಲಿ ಹಲವು ಕುಲಗಳು ಇರಬಹುದು. ಇಂತಹ ಕುಲಗಳ ಹಲವು ಮೂಲ ಪುರು

ಷರಿಗೂ ಮೂಲ ಪುರುಷರಾಗಿರುವ ಆದ್ಯರ ಹೆಸರುಗಳಿಗೆ ಗೋತ್ರಗಳೆನ್ನು ವರು. ಈ ಕುಲಗೋತ್ರಗಳಲ್ಲಿ ಗೋತ್ರಗಳ ಯೋಗ್ಯತೆಯು ಹೆಚ್ಚು, ಕುಲ ಗಳ ಯೋಗ್ಯತೆಯು ಕಡಿಮೆ; ಯಾಕಂದರೆ ಗೋತ್ರಗಳು ಎಂದೂ ಬದಲಾ ಗುವದಿಲ್ಲ; ಆದರೆ ಪ್ರಸಿದ್ಧಪುರುಷರ ಉದಯವಾಗುತ್ತಹೋದಂತೆ ಕುಲ ಗಳ ಹೆಸರುಗಳು ಬದಲಾಗುತ್ತವೆ. ಉದಾಹರಣಾರ್ಥ, ಶ್ರೀರಾಮಚಂದ್ರನ ವಂಶಕ್ಕೆ ಮೊದಲು ಸೂರ್ಯಕುಲವೆನ್ನುತ್ತಿದ್ದರು; ಮುಂದೆ ಆ ಸೂರ್ಯಕುಲ ದವರೇ ಇಕ್ಷ್ವಾಕುಕುಲದವರು, ರಘುಕುಲದವರು ಎನಿಸಿಕೊಳ್ಳಹತ್ತಿದರು. ಅದರಂತೆ ಪಾಂಡವರವಂಶದವರು ಮೊದಲು ಚಂದ್ರಕುಲದವರೆನಿಸಿಕೊಳ್ಳು ತ್ತಿದ್ದರು; ಮುಂದೆ ಅವರೇ ಕುರುಕುಲದವರು, ಶಂತನುಕುಲದವರು ಎನಿಸಿಕೊಳ್ಳಹತ್ತಿದರು; ಮುಂದೆ ಈ ಕುಲದಲ್ಲಿ ಪಂಡುವು ಪ್ರತಾಪವಂತನಾ ದದ್ದರಿಂದ ಆತನ ವಂಶದವರಿಗೆ ಪಾಂಡವರೆಂಬ ಹೆಸರು ಬಂದಿತು. ಒಟ್ಟಿಗೆ, ಮೇಲೆ ಹೇಳಿದಂತೆ ಕುಲಗಳ ಹೆಸರು ಬದಲಾಗಬಹುದು; ಆದರೆ ಗೋತ್ರ ಗಳ ಹೆಸರು ಬದಲಾಗಲಾರವು. ಗೋತ್ರಜತ್ವವು ಮನುಷ್ಯನಿಗೆ ಆ ಗೋ ತ್ರದವರ ಹೊಟ್ಟೆಯಲ್ಲಿ ಹುಟ್ಟುವದರಿಂದ ಸ್ವಾಭಾವಿಕವಾಗಿಯೇ ಬರುವದು; ಆದರೆ ಕುಲೀನತೆಯು ಗೋತ್ರಜರಲ್ಲಿ ಘನವಂತರ ಉದಯವಾಗುವ ಭಾಗ್ಯ ದಿಂದ ಉಂಟಾಗುತ್ತಿರುವದು.

**ವರ್ಣ-ಜಾತಿ-ಕುಲಗಳ ಮಹತ್ವ**—ಈ ವರೆಗೆ ನಾವು ಹೇಳಿದ್ದು ಮನಸ್ಸಿನಲ್ಲಿ ಬರುವದಕ್ಕಾಗಿ ಅದನ್ನು ಸ್ವಲ್ಪದರಲ್ಲಿ ಹೇಳಿ, ಆಮೇಲೆ ವರ್ಣ- ಜಾತಿ-ಕುಲಗಳ ಮಹತ್ವವನ್ನು ಹೇಳುವೆವು.-ವರ್ಣಗಳು ಈಶ್ವರ ಪ್ರಣೀತಗಳು; ಅವು ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರ ಎಂದು ನಾಲ್ಕು ಇರುವವು. ಪ್ರತಿ ಒಂದು ವರ್ಣದಲ್ಲಿ ಹಲವು ಗೋತ್ರಗಳಿದ್ದು, ಆಪ್ರತಿ ಒಂದು ಗೋತ್ರದಲ್ಲಿ ಹಲವು ಜಾತಿಗಳೂ ಹಲವು ಕುಲಗಳೂ ಇರುವವು. ವರ್ಣಗಳ ಯೋಗ್ಯತೆಗಿಂತ ಗೋತ್ರಗಳ ಅಥವಾ ಬೆಡಗುಗಳ ಯೋಗ್ಯತೆ ಕಡಿಮೆ, ಗೋತ್ರಗಳ ಯೋಗ್ಯತೆಗಿಂತ ಜಾತಿಗಳ ಯೋಗ್ಯತೆ ಕಡಿಮೆ, ಜಾತಿ ಗಳ ಯೋಗ್ಯತೆಗಿಂತ ಕುಲಗಳ ಯೋಗ್ಯತೆ ಕಡಿಮೆ. ಎಂದು ಹೇಳಿರುವೆವು. ಹೀಗೆವರ್ಣಗಳು ಶ್ರೇಷ್ಠಗಳೂ,ಶಾಶ್ವತಗಳೂ ಆಗಿರುವವರಿಂದಲೂ, ಅವುಗಳ ಹೊಟ್ಟೆಯಲ್ಲಿ ಜಾತಿ-ಕುಲಗಳು ಬರುವದರಿಂದಲೂ ನಾವು ಈಲೇಖವಶಿರೋ ಭಾಗದಲ್ಲಿ "ರಾಜನ ಜಾತ್ಯನುರಾಗವು" ಎಂದುಹೇಳದೆ "ರಾಜನವರ್ಣಾನು

ರಾಗವು” ಎಂದು ಹೇಳಿರುತ್ತೇವೆ; ಆದ್ದರಿಂದ ನಾವು ವರ್ಣಾನುರಾಗವೆಂದು ಹೇಳಿದ್ದರಲ್ಲಿಜಾತ್ಯನುರಾಗ, ಕುಲಾನುರಾಗಗಳ ಸಮಾವೇಶವೂಆಗುತ್ತದೆಂದು ತಿಳಿಯಬೇಕು. ಹೀಗೆ ವರ್ಣಾಂತರ್ಗತ ಜಾತಿ–ಕುಲಗಳಲ್ಲದೆ ಬೇರೆ ಸ್ವತಂತ್ರ ಜಾತಿ–ಕುಲಗಳು ಈ ದೇಶದವೂ, ಪರದೇಶದವೂ ಹಲವು ಇರುವವು. ಉದಾಹರಣಾರ್ಥ, ಈ ದೇಶದ ವೀರಶೈವರಂಥ ವರ್ಣ ಹೀನ ವೈದಿಕ ಜಾತಿಗಳೂ, ಮುಸಲ್ಮಾನ, ಕ್ರೈಶ್ಚನ್, ಪಾರ್ಶಿ, ಯಹೂದಿ ಮೊದಲಾದ ಹಲವು ಅವೈದಿಕವಾದ ಪರದೇಶದ ಜಾತಿಗಳೂ ಇರುವವು. ಈ ವರ್ಣ–ಜಾತಿ–ಕುಲಗಳ ಉಪಯೋಗವು ಮನುಷ್ಯನಿಗೆ ಇರುವದರಿಂದಲೇ ಅವು ಉಂಟಾಗಿರುವವು. ಆಯಾ ವರ್ಣದವರು ತಮ್ಮ ತಮ್ಮ ವರ್ಣಗಳ ಅಭಿಮಾನ ತಾಳಿ, ತಮ್ಮ ತಮ್ಮ ವರ್ಣಗಳ ಧರ್ಮದಂತೆ ನಡೆದುಕೊಳ್ಳುವದರಿಂದ ಅವರಲ್ಲಿ ಧರ್ಮಾಸಕ್ತಿಯು ಉಂಟಾಗುವದು; ಅಲ್ಲದೆ, ಆಯಾವರ್ಣದವರು ತಮ್ಮ ವರ್ಣಗಳ ಉತ್ಪತ್ತಿಯು ಈಶ್ವರನಿಂದ ಆಗಿರುವದರಿಂದ ನಾವೆಲ್ಲರೂ ಈಶ್ವರನಸಂಬಂಧಿಕರೆಂಬ ಆಸ್ತಿಕಭಾವವು ಅವರಲ್ಲಿ ಉತ್ಪನ್ನವಾಗುವದು. ಅದರಂತೆ ಆಯಾ ಜಾತಿಯವರು ತಮ್ಮ ತಮ್ಮ ಜಾತಿಗಳ ಅಭಿಮಾನ ತಾಳುವದರಿಂದ, ತಮ್ಮ ತಮ್ಮ ಜಾತಿಗಳ ಉತ್ಪತ್ತಿಗೆ ಕಾರಣವಾದ ಉದ್ಯೋಗಾದಿಗಳಲ್ಲಿ ಆಸಕ್ತಿಯುಂಟಾಗಿ, ಅವರು ಕರ್ತವ್ಯನಿಷ್ಠರಾಗುವರು. ಅದರಂತೆ, ತಮ್ಮ ತಮ್ಮ ಕುಲಗಳ ಅಭಿಮಾನ ತಾಳುವದರಿಂದ ತಮ್ಮ ತಮ್ಮ ಕುಲಗಳಲ್ಲಿಯ ಘನವಂತರ ವಿಷಯದ ಭಕ್ತಿ–ವಿಶ್ವಾಸಗಳಿಂದ ತಾವೂ ಅವರ ಹೆಸರಿಗೆ ಕುಂದುಬಾರದಂತೆ ಪೌರುಷಿಗಳಾಗಿ ಮಹತ್ಕಾರ್ಯಮಾಡಬೇಕೆಂಬ ಉತ್ಸಾಹವನ್ನು ಆಯಾಕುಲದವರು ತಾಳುವರು. ಒಟ್ಟಿಗೆ, ಮನುಷ್ಯನು ವರ್ಣಾಭಿಮಾನ ತಾಳುವದರಿಂದ ಆಸ್ತಿಕನೂ –ಧರ್ಮನಿಷ್ಠನೂ, ಜಾತ್ಯಭಿಮಾನ ತಾಳುವದರಿಂದ ಕರ್ತವ್ಯನಿಷ್ಠನೂ, ಕುಲಾಭಿಮಾನ ತಾಳುವದರಿಂದ ಪೌರುಷಿಯೂ ಆಗಿ, ಅವನಲ್ಲಿ ಸದ್ಗುಣಗಳ ಪೋಷಣವಾಗುವದು. ಹೀಗೆ ಮನುಷ್ಯನು ಯಾವದೊಂದು ಕಾರಣದಿಂದ ತನ್ನ ಪೂರ್ವಜರಸ್ಮರಣವಿಟ್ಟು ಅವರವಿಷಯದ ಅಭಿಮಾನ ತಾಳುವದರಿಂದ, ಸಂಸ್ಕೃತಿಯ ರಕ್ಷಣ, ಐಕ್ಯ, ಸ್ವ–ಸ್ವಕೀಯೋನ್ನತಿ ಸೌಕರ್ಯ, ಮೊದಲಾದವುಗಳಿಗೆ ಆನುಕೂಲ್ಯದೊರೆತು, ಆತನಿಗೆ ಬಹುದೊಡ್ಡಲಾಭವಾಗುವದು.

**ವರ್ಣ–ಜಾತಿ-ಕುಲಗಳ ನಾಶದಿಂದಾಗುವಹಾನಿ**--ಸಂಘದಿಂದ

ಜೀವಿಸುವದು ಮನುಷ್ಯತ್ವದಲಕ್ಷಣವೆಂತಲೂ, ಏಕಾಕಿಯಾಗಿ ಜೀವಿಸುವದು ಪಶುತ್ವದ ಲಕ್ಷಣವೆಂತಲೂ ಸರ್ವಸಾಧಾರಣವಾಗಿ ಹೇಳಬಹುದು. ಅಂದ ಬಳಿಕ ವರ್ಣ, ಜಾತಿ, ಕುಲ ಇವು ಉದಾತ್ತಹೇತುಗಳ ಸಂಘಗಳಾಗಿರಲು, ಅವನ್ನು ಮುರಿಯುವದರಿಂದ, ದಡ್ಡಿಯಲ್ಲಿ ತರುಬಿದ ದನಗಳಸ್ಥಿತಿಯಂತೆ ಮನುಷ್ಯನ ಸ್ಥಿತಿಯಾಗಬಹುದು; ಹೊರತು ಹೀಗೆ ವರ್ಣ-ಜಾತಿ-ಕುಲಗಳು ಸಂಪೂರ್ಣನಷ್ಟವಾಗುವದು ಸರ್ವಥಾ ಶಕ್ಯವೂ ಇರುವದಿಲ್ಲವು. ಈವರೆಗೆ ದುರಭಿಮಾನಿಗಳಾದ ಎಷ್ಟೋಮಹತ್ವಾಕಾಂಕ್ಷಿ ಅರಸರು, ಅನೇಕತ್ವವೇ ಸ್ವಭಾವಗುಣವಾಗಿರುವ ಸೃಷ್ಟಿಯವ್ಯಾಪಾರಗಳಿಗೆ ಸಂಬಂಧಿಸಿದ ಹಲವು ಜಾತಿ, ಹಲವುಧರ್ಮ, ಹಲವುಸಂಸ್ಕೃತಿ ಮೊದಲಾದವುಗಳಿಗೆ ಏಕತ್ವವನ್ನುಂಟುಮಾಡಲು ಹೆಣಗಿ ಹೆಣಗಿ, ಕಡೆಗೆ ಕೈಯೂರಿ, ತಮ್ಮ ಕೃತಿಯಿಂದ ಜಾತಿಗಳಸಂಖ್ಯೆಯನ್ನೂ, ಜಾತಿಮತ್ಸರವನ್ನೂ ಮಾತ್ರ ಹೆಚ್ಚಿಸಿದರು. ಇದಕ್ಕೆ ಈಗಿನ ನಮ್ಮಲ್ಲಿಯ ಆರ್ಯಸಮಾಜ, ಬ್ರಹ್ಮೋಸಮಾಜ, ಪ್ರಾರ್ಥನಾಸಮಾಜ ಮೊದಲಾವನ್ನು ಉದಾಹರಣವಾಗಿ ಕೊಡಬಹುದು. ವರ್ಣ-ಜಾತಿ-ಕುಲಗಳ ನಾಶದಿಂದ ಕ್ರಮವಾಗಿ ಜನರಲ್ಲಿ ನಾಸ್ತಿಕತೆ, ಅಧಾರ್ಮಿಕತೆ, ಕರ್ತವ್ಯಹೀನತೆ, ಸ್ವಕೀಯಾಭಿಮಾನಶೂನ್ಯತೆಗಳುಂಟಾಗುವವಲ್ಲದೆ, ಇವುಗಳ ಮೂಲಕ ನಯ-ಭಯ-ಭಕ್ತಿಭಾವಗಳ ನಾಶವಾಗಿ ಮನುಷ್ಯನು ನೀಚಸ್ವಾರ್ಥಪರಾಯಣನೂ, ಉದ್ಧಟನೂ, ಕ್ರೂರನೂ ಆಗುತ್ತಾಗುತ್ತ ಕಡೆಗೆ ಅವನು ಕ್ರೂರಶ್ವಾಪದರೂಪತಾಳುವ ಸಂಭವವಿರುವದು. ಕಾಲಕ್ಕನುಸರಿಸಿ ಈಗ ಎಲ್ಲ ವರ್ಣಗಳೂ, ಜಾತಿಗಳೂ, ಧರ್ಮಗಳೂ ಗ್ಲಾನಿಹೊಂದಿ, ಅಧರ್ಮದ ಅಭ್ಯುಸ್ಥಾನವಾಗುತ್ತಿರುವಾಗ, ಕೆಲವು ಅದೂರದರ್ಶಿಪಂಗಡದವರು ಸ್ವರಾಜ್ಯಸಂಪಾದನೆಗೆ ಅನುಕೂಲವಾದ ಪರಿಸ್ಥಿತಿಯನ್ನುಂಟುಮಾಡುವೆವೆಂದು ಹೇಳುತ್ತ, ವರ್ಣ-ಜಾತಿ-ಕುಲಗಳ ಸಂಘಟನದ ಹಿತಕಾರಕವಾದ ಸರ್ವವ್ಯಾಪಿ ಪ್ರಬಲಶಕ್ತಿಯೆನಿಸುವ ಧರ್ಮನಿರ್ದಿಷ್ಟ ವಿಧಿ-ನಿಷೇಧಗಳ ನಿಯಮುಗಳ ಪಾಲದ ಮನುಷ್ಯರ ಅನಾದಿಸಿದ್ಧ ಒಲವನ್ನೇ ಹಾಳುಮಾಡಹತ್ತಿರುವದರಿಂದ, ಅನರ್ಥಗಳು ಉಂಟಾಗಹತ್ತಿರುವವು. ಈ ಪಂಗಡದಲ್ಲಿ ಬ್ರಾಹ್ಮಣ-ಬ್ರಾಹ್ಮಣೇತರರೆಲ್ಲರ ಸಮಾವೇಶವಾಗಿರುವದು. ಈವರ್ಣ-ಜಾತಿವಿಧ್ವಂಸಕ ಸಂಘದರೀತಿಯನ್ನು ನೋಡಿದರೆ, ಇತಿಹಾಸಜ್ಞರಿಗೆ ಠಗೀಜನರ ರೀತಿಯು ನೆನಪಾಗಬಹುದು. ಠಗೀಜನರಲ್ಲಾದರೂ ಹಿಂದೂ ಮುಸಲ್ಮಾನಾದಿ ಎಲ್ಲ

ಜಾತಿಯವರೂ ಇದ್ದರು; ಆದರೆ ಭೇದವಿಷ್ಟೇ, ಈಗಿನ ವರ್ಣ-ಜಾತಿ-ವಿಧ್ವಂಸಕ ಸಂಗಡದವರು, ವರ್ಣ-ಜಾತಿ-ಕುಲಗಳ ವಿಧ್ವಂಸಮಾಡುವದು ತಮ್ಮ ಪವಿತ್ರಕರ್ತವ್ಯವು, ಅಥವಾ ತಮಗಾದ ಈಶ್ವರೀಪ್ರೇರಣೆಯು ಎಂದು ಹೇಳುವಂತೆ, ಠಗೀಜನರು ಪ್ರಯಾಣಸ್ಥರ ವಿತ್ತಜೀವಿತಗಳ ವಿಧ್ವಂಸಮಾಡುವದು ತಮ್ಮ ಪವಿತ್ರಕರ್ತವ್ಯವೆಂತಲೂ, ಉತ್ಪಾದಕಶಕ್ತಿಯಂತೆ ತಮ್ಮ ವಿಧ್ವಂಸಕ ಶಕ್ತಿಯಾದರೂ ಈಶ್ವರನದೇ ಇರುವದರಿಂದ ನಾವು ಈಶ್ವರನಕಾರ್ಯವನ್ನೇ ಮಾಡುವೆವೆಂತಲೂ ಹೇಳುತ್ತಿದ್ದರು. ಹೇಗೇ ಇರಲಿ, ಮನುಷ್ಯನ ಮನಸ್ಸು ಮೊದಲೇ ಮಂಗವಾಗಿದ್ದು, ಈಗಿನ ಈ ಜಾತಿವಿಧ್ವಂಸಕ ಸಂಗಡದವರ ಪ್ರಯತ್ನದಿಂದ ಆ ಮಂಗಮನಸ್ಸಿಗೆ ಸೆರೆಕುಡಿಸಿದಂತಾಗಿ ಅದರ ಹೊಸ ಹೊಸ ಚೇಷ್ಟೆಗಳಿಗೆ ಆರಂಭವಾಗಿರುವದು. ಪುರುಷರಷ್ಟೇಅಲ್ಲ, ಧರ್ಮದ ಮುಖ್ಯ ಆಧಾರನಾಗಿದ್ದ ಸ್ತ್ರೀಯರೂ ತಮ್ಮ ಧರ್ಮ ಮರ್ಯಾದೆಯನ್ನು ಅತಿಕ್ರಮಿಸಿ ದುಷ್ಟರಾಗುತ್ತಿರುವರು. ಹೀಗೆ ಸ್ತ್ರೀಯರು ದುಷ್ಟರಾಗುವದರಿಂದ ಅವರಿಗೆ ವರ್ಣಾಂತರ-ಜಾತ್ಯಂತರವಿವಾಹಗಳ ಹೇಸಿಗೆ ಬಾರದಹಾಗಾಗಲು, ವರ್ಣಸಂಕರ-ಜಾತಿಸಂಕರಗಳಿಗೆ ಆರಂಭವಾಗಿರುವದು. ಈ ವರ್ಣಸಂಕರ, ಜಾತಿಸಂಕರಗಳಾಗಹತ್ತಿದಬಳಿಕ ಭಗದ್ಗೀತೆಯಲ್ಲಿ ಹೇಳಿದಂತೆ ದೇವ-ಪಿತೃಗಳ ಆರಾಧನೆಯೂ, ಕುಲಧರ್ಮ-ಕುಲಾಚಾರಗಳೂ ನಡೆಯದೆ, ಅದರ ಫಲವಾದ ನರಕಪ್ರಾಪ್ತಿಗೆ, ಅಂದರೆ ಮನುಷ್ಯನ ಅಧಃಪತನಕ್ಕೆ ದಾರಿಯಾಗುವದು! ಈ ನರಕಪ್ರಾಪ್ತ್ಯಾದಿ ಅನರ್ಥಗಳು ತಾತ್ಕಾಲಿಕ ಸುಖಲೋಲುಪರಾದ ಧರ್ಮಲಂಡರ ಅದೂರದರ್ಶಿತ್ವಕ್ಕೆ ಮಹತ್ವದವಾಗಿ ತೋರದಿದ್ದರೂ, ಧರ್ಮಿಷ್ಠರ ಹೃದಯವು ಪಾಪಪುಣ್ಯಗಳ, ಹಾಗು ಹಲವು ದ್ರೋಹಸಮುಚ್ಚಯಗಳ ನರಕಪ್ರಾಪ್ತಿಯ ಭಯದಿಂದ ಕಂಪಿಸದೆ ಇರದು. ಸರ್ವತಂತ್ರ ಜಗದೀಶ್ವರಭಾವದ ಈ ಪತಿತರ ಸಂಖ್ಯೆಯು ಹೆಚ್ಚುತ್ತಾ ಹೆಚ್ಚುತ್ತಾ, ಕಡೆಗೆ ಅವರಿಗೆ ಮೇಲೆ ಹೇಳಿದಂತೆ ಕ್ರೂರಪಶು ಸ್ವರೂಪವು ಪ್ರಾಪ್ತವಾಗಲು, ಮನುಷ್ಯಜಾತಿಯು ಕಡೆಗೆ ಯಾವಗತಿಯನ್ನು ಹೊಂದೀತೆಂಬವರ ಕಲ್ಪನೆಯಾಗದೆ ಧರ್ಮಿಷ್ಠರ ಮನಸ್ಸು ವ್ಯಗ್ರವಾಗದೆ ಇರದು!

**ವರ್ಣ-ಜಾತಿ-ಕುಲಗಳು ಸ್ವಾತಂತ್ರ್ಯನಾಶಕಗಳಲ್ಲವು**—ನಮ್ಮಲ್ಲಿಯ ವರ್ಣ-ಜಾತಿ-ಕುಲಗಳ ತೊಡಕೇ ನಮ್ಮ ಪಾರತಂತ್ರ್ಯಕ್ಕೆ ಕಾರಣವಾಗಿರುವದೆಂತಲೂ, ಈ ತೊಡಕಿಲ್ಲವದರು ಈಗ ಪೃಥ್ವಿಯಲ್ಲಿ ಅಗ್ರೇಸರತ್ವ

ವನ್ನು ಪಡೆದಿರುವದರಿಂದ, ನಾವೂ ನಮ್ಮಲ್ಲಿಯ ವರ್ಣ-ಜಾತಿ-ಕುಲಗಳನ್ನು ಕಿತ್ತುಹಾಕುವೆವೆಂತಲೂ ಕೆಲವು ಬಾಲಿಶರಾದ ಉದ್ದಾಮರು ಹೇಳುವ ದುಂಟು; ಆದರೆ ಇದು ಅವರ ತಿಳಿಗೇಡಿತನವೆಂದು ಹೇಳಬಹುದು. ಅತ್ತೆ ಗೊಂದುಕಾಲ-ಸೊಸೆಗೊಂದುಕಾಲ, ದೈತ್ಯರಿಗೊಂದುಕಾಲ-ದೇವತೆಗಳಿಗೊಂ ದುಕಾಲ, ದುಷ್ಟರಿಗೊಂದುಕಾಲ-ಸುಷ್ಟರಿಗೊಂದುಕಾಲ ಎಂಬ ಸೃಷ್ಟಿಯ ನಿಯಮದಂತೆ, ಕಾಲಕ್ಕನುಸರಿಸಿ ಸರ್ವಾಧಿಪತ್ಯವು ಯಾರಿಗಾದರೂ ದೊರೆ ಯಬಹುದು, ಅದರಲ್ಲಿ ಮಹತ್ವವಿಲ್ಲ; ಆದರೆ ಯಾರಲ್ಲಿಯೇ ಆಗಲಿ, ನೀಚ ಸ್ವಾರ್ಥಬುದ್ಧಿಯು ಹೆಚ್ಚಿ ತನ್ಮೂಲಕ ಅವರು ದುರ್ಗುಣಗಳ ಮನೆಗಳಾಗಿ ಕಲಹಲಂಪಟರಾಗಲು, ಸ್ವಾತಂತ್ರ್ಯದ್ದಾಗಲಿ, ಆಧಿಪತ್ಯದ್ದಾಗಲಿ ನಾಶವಾಗು ವದಲ್ಲದೆ, ಸಧ್ಧೇತುಘಟಿತಗಳಾದ ವರ್ಣ-ಜಾತಿ-ಕುಲಗಳಿಂದ ನಾಶವಾಗುವ ದಿಲ್ಲವೆಂಬ ವಿವೇಕವನ್ನು ಮನುಷ್ಯನು ತಾಳತಕ್ಕದ್ದು. ಸದ್ಗುಣಿಗಳ ಕುಟುಂಬ, ಸಮಾಜ, ರಾಷ್ಟ್ರಗಳು ಸತ್ಫಲಭೋಗಿಗಳೂ, ದುರ್ಗುಣಿಗಳ ಕುಟುಂಬ, ಸಮಾಜ, ರಾಷ್ಟ್ರಗಳು ದುಷ್ಫಲಭೋಗಿಗಳೂ ಆಗಿರುವದನ್ನು ನಾವು ನೋಡು ವದಿಲ್ಲವೆ? ಅದರಂತೆ ವರ್ಣ-ಜಾತಿ-ಕುಲಗಳವರಲ್ಲಿಯೂ ಸದ್ಗುಣ-ದುರ್ಗು ಣಗಳ ವಾಸ್ತವ್ಯವಿದ್ದಂತೆ ಅವರಿಗೆ ಸತ್ಫಲ-ದುಷ್ಫಲಗಳಾಗುವವು. ಆದ್ದರಿಂದ ದೇಶಹಿತೈಷಿಗಳು ಸರ್ವಪ್ರಯತ್ನದಿಂದ ದೇಶದಲ್ಲಿ ವರ್ಣ-ಜಾತಿ-ಕುಲಗಳೆಂಬ ಸಧ್ಧೇತುಘಟಿತಸಂಘಗಳ ಸಹಾಯದಿಂದ ಇಡಿಯದೇಶದಲ್ಲಿ ಸದ್ಗುಣ-ಸದಾ ಚಾರ-ಸದುದ್ಯೋಗಗಳ ಪ್ರಸಾರವಾಗುವಂತೆ ಮಾಡಬೇಕಲ್ಲದೆ; ದೇಶದ ಲ್ಲಿಯ ವಿವಿಧ ಅವಗುಣ-ಅನಾಚಾರ-ನಿರುದ್ಯೋಗಗಳನ್ನು ಕಣ್ಣೆತ್ತಿನೋ ಡದೆ, ನೋಡಿದರೂ ಅವನ್ನು ತಿದ್ದಲಾರದೆ ಒಳಗೆ ಹೆಗ್ಗಣವಿಟ್ಟು ಮೇಲೆ ಗಿಲಾಯಮಾಡಿದರೆಂಬಂತೆ ವರ್ಣ-ಜಾತಿ-ಕುಲಗಳನ್ನು ಮುರಿಯಹೋ ಗುವ ಅಶಕ್ಯಕಾರ್ಯಮಾಡುವದು ಸರ್ವನಾಶಕಾರಣವೆಂಬದನ್ನು ಚನ್ನಾಗಿ ಲಕ್ಷದಲ್ಲಿಡತಕ್ಕದ್ದು; ಯಾಕಂದರೆ ಭರತಭೂಮಿಯ ಉತ್ಕರ್ಷಕಾಲದಲ್ಲಿಯೂ ಅಲ್ಲಿ ವರ್ಣ-ಜಾತಿ-ಕುಲಗಳು ಇದ್ದೇ ಇದ್ದವು; ಮತ್ತು ಈಗ ಸರ್ವಶ್ರೇಷ್ಠರೆನಿ ಸಿಕೊಳ್ಳುತ್ತಿರುವವರು, ಈಮೊದಲು ಅವನತಸ್ಥಿಯಲ್ಲಿದ್ದಾಗ ಈಗಿನಂತೆ ಆಗೂ ಅವರಲ್ಲಿ ವರ್ಣ-ಜಾತಿಗಳ ತೊಡಕು ಇರಲಿಕ್ಕಿಲ್ಲ. ಒಟ್ಟಿಗೆ, ಮನುಷ್ಯನ ಉತ್ಕ ರ್ಷಾಪಕರ್ಷಗಳಿಗೆ ಆತನ ಒಳ್ಳೆಯ ಕೆಟ್ಟಗುಣಗಳು ಕಾರಣವಲ್ಲದೆ, ವರ್ಣ- ಜಾತಿ-ಕುಲಗಳು ಸರ್ವಥಾ ಕಾರಣವಲ್ಲವು. ವಿದ್ಯೆ, ಧನ, ಶಕ್ತಿ ಇವು

ಎಲ್ಲರಿಗೂ ಬೇಕಷ್ಟೆ? ಆದರೆ ಅವು ದುರ್ಗುಣಿಯನ್ನು ಸೇರಿದರೆ ಅವುಗಳಿಂದ ದುಷ್ಪರಿಣಾಮಗಳೂ, ಸದ್ಗುಣಿಯನ್ನು ಸೇರಿದರೆ ಅವುಗಳಿಂದ ಸತ್ಪರಿಣಾಮಗಳೂ ಆಗುವದು ಅನುಭವಸಿದ್ಧವಾಗಿರುವರಿಂದ, ಪ್ರಾಮುಖ್ಯವಾಗಿ ರಾಷ್ಟ್ರದಲ್ಲಿ ಸರ್ವತ್ರ ಸದ್ಗುಣಸದುದ್ಯೋಗಗಳ ಪ್ರಸಾರವಾಗಬೇಕೆಂಬದನ್ನು ರಾಷ್ಟ್ರಹಿತೈಷಿಗಳುಲಕ್ಷದಲ್ಲಿಡತಕ್ಕದ್ದು.

ಇನ್ನೊಂದು ಮಾತಿನ ಎಚ್ಚರಿಕೆಯನ್ನು ನಮ್ಮವರಿಗೆ ಕೊಡುವದು ಅವಶ್ಯವಾಗಿರುವದು. ವರ್ಣ–ಜಾತಿ–ಕುಲ–ವಿಹೀನರ ಈಗಿನ ಆಧಿಪತ್ಯವನ್ನು ಬೆರಗಾಗಿ ನೋಡುವವರು, ಆ ಆಧಿಪತ್ಯದಿಂದ ಜಗತ್ತಿಗೆ ಈಗ ಎಷ್ಟು ತಾಪವಾಗಿರುವದೆಂಬದನ್ನೂ, ಹಾಗು ಮುಂದೆ ಇನ್ನೂ ಎಷ್ಟು ತಾಪವಾಗಬಹುದೆಂಬದನ್ನೂ ಸ್ವಾನುಭವದಿಂದ ವಿಚಾರಿಸತಕ್ಕದ್ದು. ಅವರ ಪರರಕ್ತಶೋಷಕ ಒಕ್ಕಟ್ಟು, ಜಗತ್ತನ್ನೇ ಪರಾಧೀನವಾಗಮಾಡುವ ಅವರ ಘಾತಕ ಯಾಂತ್ರಿಕಶೋಧ, ಜಗತ್ತನ್ನೇ ಸುಟ್ಟುಸೂರೆಗೊಳ್ಳಬಹುದಾದ ಅವರ ರಾಕ್ಷಸಿಯುದ್ಧೋಪಕರಣಗಳು, ಬಾಹ್ಯಮನೋಹರವಾದ ಅವರ ಸ್ವಪರಘಾತಕ–ಯುಕ್ತಿಪ್ರಯುಕ್ತಿಗಳು, ಇವುಗಳಿಂದ ಜಗತ್ತಿಗೇ ತಾಪವುಂಟಾಗಿರುವಾಗ, ಆ ತಾಪಕ್ಕೆ ಕಾರಣರಾದ ಅವರುಕೂಡ ಜಗದಂತರ್ಗತರಾಗಿರಲು,ಒಂದಿಲ್ಲೊಂದು ಬಗೆಯ ತಾಪಕ್ಕೆ ಅವರೂ ಗುರಿಯಾಗಿರುವರೆಂದುನಿಶ್ಚಯವಾಗಿ ತಿಳಿದುಕೊಳ್ಳಬೇಕು! ಅವರು ತಮ್ಮತಮ್ಮೊಳಗೆ, ಕೊಬ್ಬಟ್ಟೆನೊಳಗಿನ ಬೆಂಕಿಯಂತೆ ಒಳಗಿಂದೊಳಗೆ ಈಗಲೂ ಹೊತ್ತುತ್ತಿರುವರೆಂಬದನ್ನು ಮರೆಯಬಾರದು. ಇಷ್ಟೆಲ್ಲ ಅನರ್ಥಕ್ಕೆ ವರ್ಣ--ಜಾತಿ–ಕುಲಗಳ ಧರ್ಮಗಳ ಪ್ರತಿಬಂಧವು ಅವರಿಗೆ ಇಲ್ಲದಿರುವದೇ ಕಾರಣವು. ಈ ಪವಿತ್ರ ಪ್ರತಿಬಂಧವುಳ್ಳ ಭಾರತರು ನಾವು ನಮ್ಮ ಉತ್ಕರ್ಷಕಾಲದಲ್ಲಿಯೂ ಕೂಡ ಹೀಗೆ ಜಗತ್ತಿಗೆ ತಾಪವನ್ನುಕೊಟ್ಟಿರುವದಿಲ್ಲ. ತಾಪಕ್ಕೆಗುರಿಯಾಗಿ ಆಶ್ರಯಬೇಡಲಿಕ್ಕೆ ಬಂದ ಪರದೇಶಸ್ಥರಿಗೆಕೂಡ ನಾವು ಆಶ್ರಯಕೊಟ್ಟಿರುವದು ಇತಿಹಾಸಪ್ರಸಿದ್ಧವಾಗಿರುವದು. ನಮ್ಮಲ್ಲಿಯಭಾರತಕಾಲದ ಧರ್ಮರಾಜ, ಐತಿಹಾಸಿಕಕಾಲದ ಅಶೋಕರಾಜ ಇವರು ಪರರಾಜರನ್ನು ಗೆದ್ದು ಚಕ್ರವರ್ತಿಗಳಾದರು ಸರಿ; ಆದರೆ ಯಾತಕ್ಕೆ? ಪರರಾಜರ ರಾಜ್ಯದೊಳಗಿನ ಸಂಪತ್ತನ್ನು ತಮ್ಮ ರಾಜ್ಯದಲ್ಲಿ ತುಂಬಿಕೊಂಡು ಅವರನ್ನು ದಾರಿದ್ರ್ಯದುಃಖಕ್ಕೆ ಗುರಿಮಾಡುವದಕ್ಕಾಗಿಯಲ್ಲ, ತಮ್ಮ ಸಾರ್ವಭೌಮಾಧಿಕಾರದಿಂದ ಸರ್ವತ್ರ ಸದ್ಧರ್ಮ, ಸದಾಚಾರ, ಸದ್ಗುಣಗಳ ಪ್ರಸಾರಮಾಡಿ ಸರ್ವರ

ತಾಪವನ್ನು ದೂರಮಾಡುವದಕ್ಕಾಗಿ! ಬರಿಯ ಸಂಪತ್ತು--ಅಧಿಕಾರಗಳ ಸಂಪಾದನದಿಂದ ಸ್ವಪರತಾಪನಿವಾರಣವಾಗುತ್ತದೆಂದು ಸರ್ವಥಾ ತಿಳಿಯಬಾರದು; ದುಷ್ಕರ ಆ ಸಂಪಾದನದಿಂದ ಪರಪೀಡೆಯುಂಟಾಗಿ, ತನ್ಮೂಲಕ ಸ್ವಪರನಾಶವು ತಪ್ಪದೆ ಆಗುವದು; ಆದ್ದರಿಂದ ನಾವು ಅನ್ಯರ ಬರಿಯ ಐಶ್ವರ್ಯ, ಆಧಿಪತ್ಯಗಳಿಗೆ ಅಸೂಯೆಪಡದೆ, ಹಿಂದೆಭರತಭೂಮಿಯು ಉತ್ಕರ್ಷಕಾಲದಲ್ಲಿ ಯಾವ ಯೋಗ್ಯತೆಪಡೆದಿತ್ತೆಂಬದನ್ನು ನೆನಿಸಿ, ಸೃಷ್ಟಿಯ ಚಕ್ರನೇಮಿಕ್ರಮವನ್ನು ವಿಚಾರಿಸಿ, ಆಧಿಪತ್ಯಕ್ಕಿಂತ ಪರಪೀಡಾರಾಹಿತ್ಯವೂ, ಸ್ವಾಚಾರನಿರತತೆಯೂ, ಉದ್ಯೋಗತತ್ಪರತೆಯೂ ಇಂದಿಲ್ಲನಾಳೆ ಪ್ರಗತಿಗೆ ಕಾರಣವಾದಾವೆಂಬದನ್ನು ನೆನಪಿನಲ್ಲಿಟ್ಟು ನಡೆಯಬೇಕು. ಕೂಳುಕಾಣದ ಕಂಗಾಲನು ಸಿಕ್ಕದ್ದನ್ನು ತಿನ್ನುವಂತೆ, ಸ್ವರಾಜ್ಯಕಳೆದುಕೊಂಡಿರುವೆವೆಂಬ ದಡ್ಡತನದ ತಿಳುವಳಿಕೆಯಿಂದ, ಅದನ್ನು ಸಂಪಾದಿಸುವದಕ್ಕಾಗಿ ಮಾಡಬಾರದ್ದನ್ನು ಸಿಕ್ಕಹಾಗೆ ಮಾಡತಕ್ಕದ್ದಲ್ಲ; ಯಾಕಂದರೆ ನಾವು ಇರುವಹಾಗೆ ಇದ್ದರೆ ನಮ್ಮ ಸ್ವರಾಜ್ಯವು ನಮ್ಮನ್ನು ಬಿಟ್ಟು ಎಲ್ಲಿಯೂ ಹೋಗುವದಿಲ್ಲೆಂಬದರ ದಿಗ್ದರ್ಶನವನ್ನು ನಾವು ಹಿಂದೆ ೪ ನೇ ರಹಸ್ಯದಲ್ಲಿ, ಅಂದರೆ, “ ಹಳ್ಳಿಯ ಉತ್ಕರ್ಷವೇ ರಾಷ್ಟ್ರದ ಉತ್ಕರ್ಷವು ” ಎಂಬ ವಿಷಯವನ್ನು ಕುರಿತು ವಿವರಿಸಿರುವಾಗಮಾಡಿದ್ದೇವೆ.

**ರಾಜನ ವರ್ಣಾನುರಾಗವೇ ಉಜ್ವಲ ಪ್ರಜಾನುರಾಗದ್ಯೋತಕವು**—ಇನ್ನು ರಾಜರ ವರ್ಣಾನುರಾಗದ ಸಂಬಂಧದಿಂದ ವಿಚಾರ ಮಾಡುವಾ. ಈವರೆಗೆ ಭರತಭೂಮಿಯನ್ನು ವೈದಿಕ–ಅವೈದಿಕರೊಳಗಿನ ವಿವಿಧಜಾತಿಯ ಅರಸರು ಆಳುತ್ತಾಬಂದಿರುವರು. ಅವರಲ್ಲಿ ವಿವೇಕಿಗಳಾದವರು ಪ್ರಜೆಗಳ ವರ್ಣ–ಜಾತಿ–ಕುಲ–ಧರ್ಮಾದಿಗಳ ರಕ್ಷಣಮಾಡುತ್ತ, ಅವನ್ನು ಪ್ರೋತ್ಸಾಹಿಸುತ್ತ ಸರ್ವತ್ರ ಶಾಂತಿಗೆ ಆಸ್ಪದವಿತ್ತು, ಪ್ರಜಾನುರಾಗಿಗಳೆಂಬ ಗೌರವದ ಪದವಿಯನ್ನು ಪಡೆದರು. ಅವಿವೇಕಿಗಳಾದವರು ತಮ್ಮ ಜಾತಿ–ಧರ್ಮಾದಿಗಳನ್ನು ಉಪದೇಶಾದಿ ಸೌಮ್ಯ ಉಪಾಯಗಳಿಂದಲೂ ಅಲ್ಲ, ಒತ್ತಾಯದಿಂದ ಬೆಳಿಸಲಿಕ್ಕೆ ಹೋಗಿ ಸರ್ವತ್ರ ತಾಪವನ್ನುಂಟುಮಾಡಿ ಪ್ರಜಾಘಾತಕರೆಂಬ ಅಪಕೀರ್ತಿಯನ್ನು ಪಡೆದರು; ಆದರೆ ವೈದಿಕರಾಜರು ಧರ್ಮರಾಜನಂತಹ ವಿವೇಕಿಗಳೇ ಇರಲಿ, ವೇನರಾಜನಂತಹ ಅವಿವೇಕಿಗಳೇ ಇರಲಿ, ವರ್ಣಸಂಕರ–ಜಾತಿಸಂಕರಗಳ ಗೊಡವಿಗೆ ಮಾತ್ರ ಹೋದಂತೆ

ತೋರುವದಿಲ್ಲವೆಂಬವಮಾತು ಲಕ್ಷ್ಯದಲ್ಲಿಡತಕ್ಕದ್ದಾಗಿದೆ. ಯಾಕಂದರೆ ಚತುರ್ವರ್ಣಾತ್ಮಕ ವೈದಿಕರಾಜರು ವರ್ಣಸಂಕರವಿರೋಧಿಗಳಾಗಿರುವರು; ಮತ್ತು ನಿಜವಾದ ಐಕ್ಯಕ್ಕೆ ಏಕಜಾತಿ, ಏಕಧರ್ಮಾದಿ ಅಶಕ್ಯಸಂಗತಿಗಳು ಕಾರಣವಾಗಿರದೆ, ಧಾರ್ಮಿಕ ನಿಸ್ವಾರ್ಥಬುದ್ಧಿ, ಪರಧರ್ಮಸಹಿಷ್ಣುತಾಪೂರ್ವಕ ಸ್ವಧರ್ಮನಿಷ್ಠೆ, ಭೂತದಯೆ, ಸ್ವಾತ್ಮೌಪಮ್ಯಬುದ್ಧಿ ಮುಂತಾದ ಉದಾತ್ತಗುಣಗಳು ಕಾರಣವಾಗಿರುವವೆಂಬ ಧರ್ಮಸಾರವು, ವೈದಿಕಧರ್ಮದವರ ರಕ್ತದಲ್ಲಿ ಅವರಿಗೆ ಗೊತ್ತಿಲ್ಲದೆ ತಾನೇಸೇರಿಬಿಟ್ಟಿರುವದು.

ಇನ್ನು, ಅರಸರಿಗೆ ಅಥವಾ ಮತಸ್ಥಾಪಕರಿಗೆ, ಅನ್ಯರು ತಮ್ಮ ಜಾತಿಯವರು, ಅಥವಾ ತಮ್ಮ ಧರ್ಮದವರು ಆಗಬೇಕೆಂಬ ಇಚ್ಛೆಯುಂಟಾಗಲಿಕ್ಕೆ ಮೂರು ಕಾರಣಗಳಿರುವವು. ತಮ್ಮ ಮತವೇ ತಾರಕವಾದ್ದರಿಂದ ತಮ್ಮಂತೆ ಅನ್ಯರೂ ತಮ್ಮ ಮತ ಸ್ವೀಕರಿಸಿ ಕೃತಾರ್ಥರಾಗಬೇಕೆಂಬ ಸದಿಚ್ಛೆಯು ಗ್ರಾಹ್ಯವಾದ ಒಂದನೆಯಕಾರಣವು; ತನ್ನಂತೆ ಮಂದಿಯಿರಬೇಕೆಂಬ ಮನುಷ್ಯಪ್ರಾಣಿಯ ಸ್ವಾಭಾವಿಕವಾದ ಅಭಿಮಾನವು ಗೌಣವಾದ ಎರಡನೆಯ ಕಾರಣವು; ತಮ್ಮವರಸಂಖ್ಯೆಯು ಹೆಚ್ಚಾದರೆ ಸಂಘಶಕ್ತಿಯಿಂದ ಅನ್ಯರನ್ನು ಅತಿಕ್ರಮಿಸಲಿಕ್ಕೆಬರುತ್ತದೆಂಬ ದುರಿಚ್ಛೆಯು ತ್ಯಾಜ್ಯವಾದ ಮೂರನೆಯಕಾರಣವು; ಆದರೆ ರಾಜರು ಯಾವಕಾರಣದಿಂದಲೂ ತಮ್ಮ ಪ್ರಜೆಗಳ ಜಾತಿ–ಮತಗಳಲ್ಲಿ ಕೈಹಾಕುವದು ನ್ಯಾಯ್ಯವೂ, ಹಿತಕರವೂ, ಪ್ರಜಾನುರಾಗದ್ಯೋತಕವೂ ಅಲ್ಲವು; ಯಾಕಂದರೆ ರಾಜನು ಪ್ರಜೆಗಳ ತಂದೆಯಾದದ್ದರಿಂದ, ಪುತ್ರವಾತ್ಸಲ್ಯವುಳ್ಳ ತಂದೆಯು ಭಿನ್ನ ಭಿನ್ನ ಸ್ವಭಾವದ, ಭಿನ್ನ ಭಿನ್ನ ಅಭಿರುಚಿಯ ತನ್ನಮಕ್ಕಳನ್ನು ಅವರ ಸ್ವಭಾವ–ಅಭಿರುಚಿಗಳಗೊಡವಿಗೆ ಹೋಗದೆ, ಅವರನ್ನು ಸಮಾನವಾದ ವಾತ್ಸಲ್ಯದಿಂದ ರಕ್ಷಿಸುವಂತೆ, ಪ್ರಜಾನುರಾಗವುಳ್ಳರಾಜನು ತನ್ನಪ್ರಜೆಗಳ ಭಿನ್ನ ಭಿನ್ನ ವರ್ಣ, ಭಿನ್ನ ಭಿನ್ನ ಜಾತಿ, ಭಿನ್ನ ಭಿನ್ನ ಧರ್ಮಗಳಿಗನುಸರಿಸಿ ಅವರನ್ನು ರಕ್ಷಿಸುವದಲ್ಲದೆ, ತನ್ನ ಧರ್ಮ–ಜಾತಿಗಳಿಗೆ ಉತ್ತೇಜನಕೊಡುವಂತೆ ಅವರ ವರ್ಣ–ಧರ್ಮ–ಜಾತಿಗಳಿಗೂ ಉತ್ತೇಜನಕೊಡಬೇಕು; ಅಂಥವರ್ಣಾನುರಾಗವುಳ್ಳ ರಾಜನೇ ಪ್ರಜಾನುರಾಗವುಳ್ಳವನೆನಿಸುವನು. ಇಂತಹವರ್ಣಾನುರಾಗವು ವೈದಿಕನಾದಧರ್ಮರಾಜನಲ್ಲಿಸ್ವಾಭಾವಿಕವಾಗಿಯೇ ಇತ್ತೆಂದುಹೇಳಬಹುದು; ಯಾಕಂದರೆಭಗವದ್ಗೀತೆಯ—"ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ | ಸ್ವಧರ್ಮೇ ನಿಧನಂ

ಶ್ರೇಯಃ ಪರಧರ್ಮೋ ಭಯಾವಹಃ|| ಎಂಬ ಉದಾತ್ತ ಉಕ್ತಿಯಂತೆ, ವೈದಿಕರಾಜರಿಗೆ ಪ್ರಜೆಗಳ ಜಾತಿ-ಧರ್ಮಗಳ ಪಾಲನಮಾಡುವದಷ್ಟೇ ಅವರಪವಿತ್ರ ಕರ್ತವ್ಯವಾಗಿರುವದು. ಈ ಪವಿತ್ರ ಕರ್ತವ್ಯವನ್ನು ನಮ್ಮ ದೇಶವನ್ನಾಳಿದ ಬೌದ್ಧ, ಜೈನ, ಮುಸಲ್ಮಾನ ಮೊದಲಾದವರಲ್ಲಿಯ ಉದಾರರಾದ ವಿವೇಕಿ ರಾಜರೂ ಬಹು ಚನ್ನಾಗಿ ಪಾಲಿಸಿರುವರು. ಆ ಘನವಂತರಾಜರು ಹಿಂದೂ ಧರ್ಮಕ್ಕೆ ಕೊಟ್ಟಿರುವ ಗೌರವ, ಉತ್ತೇಜನಗಳ ಸಾಕ್ಷಿಗಳು ಈಗಲೂ ಹೇರಳವಾಗಿರುವವು. ಈ ಸಂಬಂಧದಿಂದ ಮೊಗಲಬಾದಶಹರಲ್ಲಿ ಉದಾರನಾದ ಶಹಾಜಹಾನನದೊಂದು ಆಖ್ಯಾಯಿಕೆಯು ಕೇಳಿಕೆಯಲ್ಲಿರುವದು. ಶಹಾಜಹಾನಬಾದಶಹನು ಒಮ್ಮೆ ಬ್ರಾಹ್ಮಣರ ದೇವಾಲಯಕ್ಕೆ ಹೋದಾಗ, ಬ್ರಾಹ್ಮಣಅರ್ಚಕನು ಆ ಬಾದಶಹನಿಗೆ ಫಲಮಂತ್ರಾಕ್ಷತೆಕೊಡಲು, ಆ ಉದಾರನಾದ ಬಾದಶಹನು ಭಕ್ತಿಯಿಂದ ಅವನ್ನು ಸೆರಗಿನಲ್ಲಿ ಸ್ವೀಕರಿಸಿದನು. ಆಗ ಸಂಗಡಬಂದಿದ್ದ ಮುಸಲ್ಮಾನರು ಬಾದಶಹನಿಗೆ—"ಇದೇನು ಹುಚ್ಚುತನವು ? " ಎಂದು ಕೇಳಲು, ಬಾದಶಹನು—"ಹುಚ್ಚುಪ್ರಜೆಗಳ ರಾಜನು ಹುಚ್ಚನೇ " ಎಂಬ ರಹಸ್ಯಪೂರ್ಣವಾದ ಸದರ್ಥದ ಉತ್ತರಕೊಟ್ಟನಂತೆ!

ಇನ್ನು, ಈ ವರ್ಣ–ಜಾತಿ–ಧರ್ಮಗಳ ರಕ್ಷಣದ ಸಂಬಂಧದಿಂದ ಕೆಲವು ಅದೂರದರ್ಶಿ ರಾಜರು ಮಾಡುವ ದಡ್ಡತನವನ್ನು ಉಲ್ಲೇಖಿಸುವದೂ ಅವಶ್ಯವಾಗಿರುವದು. ಅವರ ದಡ್ಡತನವೆಂದರೆ "ನಾವು ಪ್ರಜೆಗಳ ಧರ್ಮ–ಜಾತಿಮೊದಲಾದವುಗಳಲ್ಲಿ ಕೈಹಾಕುವದಿಲ್ಲ, ಅವುಗಳಗೊಡವೆ ನಮಗಿಲ್ಲ" ಎಂದು ಉದಾಶೀನಭಾವತಾಳುವದು! ಕುಟುಂಬದೊಳಗಿನ ಯಜಮಾನನು ತನ್ನ ಕುಟುಂಬದೊಳಗಿನ ಜನರ ಧಾರ್ಮಿಕಾಚರಣೆ, ಪರಸ್ಪರ ಸಂಬಂಧಗಳ ತಾರತಮ್ಯದಂತೆ ಅವರು ಪರಸ್ಪರ ಮಾನಮರ್ಯಾದೆ ಮಾಡುವದು, ಪರಸ್ಪರರ ವಿಷಯದಲ್ಲಿ ಪ್ರೇಮತಾಳುವದು, ಎಲ್ಲರೂ ಉದ್ಯೋಗತತ್ಪರರಾಗಿರುವದು ಇತ್ಯಾದಿ ಸದಾಚಾರಗಳಿಗೆ ಲಕ್ಷಕೊಟ್ಟು, ಕುಟುಂಬದ ಜನರಲ್ಲಿ ಐಕ್ಯಉಂಟಾಗುವಂತೆ ದಕ್ಷತೆಯಿಂದ ಯತ್ನಿಸದಿದ್ದರೆ, ಕುಟುಂಬದ ಜನರು ಸ್ವೇಚ್ಛಾಚಾರಿಗಳೂ, ಉದ್ಧಟರೂ, ಪರಹಿಂಸಕರೂ ಆಗಿ ಕಡೆಗೆಕುಟುಂಬದ ಯಜಮಾನನ ಮೇಲೆಯೇ ತಿರುಗಿ ಬಿದ್ದು, ಅವನ ನಾಶಮಾಡಲು ಯತ್ನಿಸಬಹುದು. ಅದರಂತೆ ರಾಜ್ಯರೂಪಕುಟುಂಬದ ಯಜಮಾನನಾದ ಅರಸನು ಕೂಡ ತನ್ನ

ಕುಟುಂಬದವರಾದ ಪ್ರಜೆಗಳ ವರ್ಣ–ಧರ್ಮ–ಜಾತಿ ಮೊದಲಾದವುಗಳ ರಕ್ಷಣಮಾಡದೆ ಉದಾಸೀನಭಾವತಾಳಿದರೆ, ನಿಶ್ಚಯವಾಗಿ ಆ ಕುಟುಂಬದ ಯಜಮಾನನಂತೆ ದುಷ್ಫಲವನ್ನು ಭೋಗಿಸಬೇಕಾಗುವದು.

ಒಟ್ಟಿಗೆ, ವರ್ಣಾನುರಾಗತಾಳುವ ರಾಜನು ಧರ್ಮರಾಜನಂತೆ ಘನವಂತನೇ ಇರಬೇಕಾಗುವದು. ಆತನು ಧರ್ಮರಾಜನಂತೆ ಸ್ವತಃ ಸ್ವಧರ್ಮನಿಷ್ಠನೂ, ಪರಧರ್ಮಪ್ರೇಮಿಯೂ ಇರಬೇಕಾಗುವದಲ್ಲದೆ, ತಮ್ಮ ತಮ್ಮ ಧರ್ಮಗಳ ಉಲ್ಲಂಘನ ಮಾಡುವವರನ್ನು ದಂಡಿಸಿ ಹಾದಿಗೆ ತರಲು ಆತನು ಪ್ರತಾಪಿಯೂ ಇರಬೇಕಾಗುವದು. ರಾಜನು ಬರಿಯ ಧರ್ಮನಿಷ್ಠನಿದ್ದು ಪ್ರತಾಪಹೀನನಾಗಿದ್ದರೆ, ಪ್ರಜೆಗಳು ಆತನನ್ನು ಲಕ್ಷಿಸದೆ ಸ್ವೇಚ್ಛಾಚಾರಿಗಳಾಗುವರು. ಬರಿಯ ಪ್ರತಾಪಿಯಿದ್ದು ಸ್ವತಃ ಧರ್ಮನಿಷ್ಠನಾಗಿರದಿದ್ದರೆ, ಆತನ ಪರೋಪದೇಶದ ಪಾಂಡಿತ್ಯದಿಂದ ನಿಜವಾದ ಧರ್ಮರಕ್ಷಣವಾಗದೆ, ಧರ್ಮದ ಸೋಗುಮಾತ್ರ ತೋರಬಹುದು; ಆದ್ದರಿಂದ ರಾಜನು ವರ್ಣಾನುರಾಗವುಳ್ಳವನಾಗಬೇಕಾದರೆ, ಆತನು ಧರ್ಮನಿಷ್ಠನೂ, ಪ್ರತಾಪವಂತನೂ ಆಗಿರಬೇಕು; ಆದ್ದರಿಂದಲೇ ವೈಶಂಪಾಯನರು ವರ್ಣಾನುರಾಗವುಳ್ಳ, ಅರ್ಥಾತ್ ಪ್ರಜಾನುರಾಗವುಳ್ಳ ಧರ್ಮರಾಜನ ಸಂಬಂಧದಿಂನ ಹೇಳುವಾಗ ನಾವು ಈ ಲೇಖದ ಆರಂಭದ ಅವತರಣದಲ್ಲಿ ಹೇಳಿರುವಂತೆ—“ಧರ್ಮನಿಷ್ಠನೂ, ಪ್ರತಾಪವಂತನೂ ಆದ ಧರ್ಮರಾಜನು ಎಲ್ಲ ಜಾತಿಯವರಲ್ಲಿಯೂ ಅನುರಾಗವುಳ್ಳವನಾಗಿದ್ದನು.” ಎಂದು ಹೇಳಿರುವದು ಬಹು ಸ್ವಾರಸ್ಯವಾಗಿರುತ್ತದೆ; ಆದ್ದರಿಂದ ಧರ್ಮರಾಜನಿಗೆ ಜೋಡಿಸಿರುವ “ಧರ್ಮನಿಷ್ಠನೂ” “ಪ್ರತಾಪವಂತನೂ” ಎಂಬ ವಿಶೇಷಣಗಳ ಮಹತ್ವವನ್ನು ರಾಜ–ಪ್ರಜರಿಬ್ಬರೂ ಲಕ್ಷದಲ್ಲಿಡತಕ್ಕದ್ದು.

---

**ಸಮಾಪ್ತಂ.**

